CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಫೆಬ್ರವರಿ ೩, ೨೦೦೫ (ಮಾಘ ೧೪, ಶಕ ವರ್ಷ ೧೯೨೬) | ಸಂಚಿಕೆ ೫ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-2, ಬಿಜಾಪುರ**

**ಪ್ರಕರಣದ ಸಂಖ್ಯೆ: ಕಾಅಬ: ಕಾನಪ:ಮಪ್ರ: ಎಸ್‌ಆರ್-221/2004 ದಿನಾಂಕ: 29ನೇ ಡಿಸೆಂಬರ್ 2004**

**ಅರ್ಜಿದಾರರು :**

1. ಅನುಸೂಯಾ ಗಂಡ ಸೋಮರಾಯ ಹಡಗಲಿ ವಾಸ: ಕಾವಿಪ್ಲಾಟ ರೇಲ್ವೆಸ್ಟೇಶನ್ ರೋಡ್ ಬಿಜಾಪುರ.

**ವಿರುದ್ಧ**

**ಪ್ರತಿವಾದಿಗಳು:**

1. ವ್ಯಾಸರಾಜ ಶ್ಯಾಮರಾವ ದಿವಾನಜಿ ವಾಸ: ಗುಜರಗಲ್ಲಿ ಬಿಜಾಪುರ
2. ದಿ ಬ್ರ್ಯಾಂಚ್ ಮ್ಯಾನೇಜರ್ ದಿ ನ್ಯೂ ಇಂಡಿಯಾ ಇನ್ಸೂರೇನ್ಸ್ ಕಂ.ಲಿ., ಹನಮಶೆಟ್ಟಿ ಬಿಲ್ಡಿಂಗ್ ಗುರುಕುಲ ರೋಡ್ ಬಿಜಾಪುರ.

**ಪ್ರಕಟಣೆ:**

ಶ್ರೀ:ಶ್ರೀಮತಿ ಅನುಸೂಯಾ ಗಂಡ ಸೋಮರಾಯ ಹಡಗಲಿ ಇವರುಗಳಾದ ತಾವು ಮೃತ ಪರಶುರಾಮ ಸೋಮರಾಯ ಹಡಗಲಿ ಇವರ ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಪರಶುರಾಮ ಸೋಮರಾಯ ಹಡಗಲಿ ಇವರು ಒಂದನೇ ಪ್ರತಿವಾದಿಗಳಾದ ವ್ಯಾಸರಾಜ ಶ್ಯಾಮರಾವ ದಿವಾನಜಿ ಇವರ ಟೊಯೋಟಾ ಕಾರ್ ಕೆಎ -28 ಎಂ-2652 ರಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ದಲಿಂಗಪ್ಪಾ ಆಲೂರು**

ಪಿ.ಆರ್.122 ಕಾರ್ಮಿಕ ಪರಿಹಾರ ಆಯುಕ್ತರು, ಉಪವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪುರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-2, ಮಂಡ್ಯ**

**ಪ್ರಕರಣದ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ:2:2005**

**ಅರ್ಜಿದಾರರು :**

1. ಎ. ಎಸ್. ಮಹಲಿಂಗಯ್ಯ ಬಿನ್ ಲೇಟ್ ಶಂಕರಯ್ಯ
2. ಭಾಗ್ಯ ಕೋಂ ಎ. ಎಸ್. ಮಹಲಿಂಗಯ್ಯ
3. ಎಂ. ತೇಜಸ್ವಿನಿ ಬಿನ್ ಎ. ಎಸ್. ಮಹಲಿಂಗಯ್ಯ
4. ಎ. ಎಂ. ರವೀಂದ್ರ, ಬಿನ್ ಎ. ಎಸ್. ಮಹಲಿಂಗಯ್ಯ ವಾಸ ಗೆಜ್ಜಲಗೆರೆ ವಿಲೇಜ್ ಮದ್ದೂರು ತಾ, ಮಂಡ್ಯ ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು:**

1. ಡೀನ್ ಮೊಹಮ್ಮದ್ ಬಿನ್ ಇಲಿಯಾಸ್ ಷರೀಫ್ ನಂ.57 ಮುಸ್ಲಿಂ ಬ್ಲಾಕ್, ಮದ್ದೂರು ಟೌನ್, ಮಂಡ್ಯ ಜಿಲ್ಲೆ.
2. ಬ್ರಾಂಚ್ ಮ್ಯಾನೇಜರ್ ನ್ಯಾಷನಲ್ ಇನ್ಸೂರೆನ್ಸ್ ಕಂ.ಲಿ., ವಿ.ವಿ. ರಸ್ತೆ, ಮಂಡ್ಯ.

**ಅಧಿಸೂಚನೆ:**

ಅರ್ಜಿದಾರರಾದ ಎ. ಎಸ್. ಮಹಲಿಂಗಯ್ಯ ಮತ್ತು ಇತರರು ಅವರು ತಮ್ಮ ಮಗನಾದ ಶ್ರೀ ಎ. ಎಂ. ಮಹೇಶ್ ಅವರು ಒಂದನೇ ಪ್ರತಿವಾದಿ ಶ್ರೀ:ಶ್ರೀಮತಿ ಡೀನ್ ಮಹಮ್ಮದ್ ರವರ ಬಳಿ ಕ್ಲೀನರ್ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ: 28/29.9.04 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 4.1.2005 ರಂದು ನೀಡಲಾಗಿದೆ.

ಪಿ.ಆರ್.123 ಕಾರ್ಮಿಕ ಅಧಿಕಾರಿ, ಮಂಡ್ಯ ಉಪವಿಭಾಗ-2, ಮಂಡ್ಯ.

**ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ ಭದ್ರಾವತಿ ವಿಭಾಗ, ಭದ್ರಾವತಿ**

**ಸಂಖ್ಯೆ: ಎಫ್‌ಓಸಿ:ಸಿಓಎಸ್:ಸಿಆರ್: 23/2002-2003 ದಿನಾಂಕ: 15ನೇ ಡಿಸೆಂಬರ್ 2004**

**ನಿರೂಪಣಾಧಿಕಾರಿ :** ಶ್ರೀಮತಿ ಸೀಮಾಗರ್ಗ್ ಭಾಆಸೇ ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ.

**ಫಿರ್ಯಾದುದಾರರು :** ವಲಯ ಅರಣ್ಯಾಧಿಕಾರಿಗಳು, ಭದ್ರಾವತಿ ವಲಯ,

**ವಿರುದ್ಧ**

**ಅರ್ಜಿದಾರರು :** ಶ್ರೀ ಬಿ. ಎನ್. ಶೇಷಗಿರಿ ಬಿನ್ ನಾಗೇಂದ್ರಗಿರಿ ವ್ಯವಸಾಯಗಾರರು ಬಾಬಳ್ಳಿ ಭದ್ರಾವತಿ ತಾಲ್ಲೂಕು.

**ಪ್ರಕರಣದ ಹಿನ್ನೆಲೆ:**

ದಿನಾಂಕ: 7.11.2002 ರಂದು ಭದ್ರಾವತಿ ವಿಭಾಗದ ಭದ್ರಾವತಿ ವಲಯದ ಅರಳಿಹಳ್ಳಿ ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರು ಅರಳಿಹಳ್ಳಿ ಗಸ್ತಿನ ಅತ್ತಿಗುಂದದಿಂದ ಬೆಳ್ಳಿಗೆರೆಗೆ ಹೋಗುವ ರಸ್ತೆಯ ಸೀಗೇಹಳ್ಳದ ಸಮೀಪ ದ್ವಿಚಕ್ರ ವಾಹನ ಬರುತ್ತಿರುವುದು ಕಂಡು ಬಂದಿತು ಅನುಮಾನಗೊಂಡು ನಿಲ್ಲಿಸಲು ಸೂಚಿಸಿದಾಗ ಆಸಾಮಿಗಳು ವಾಹನವನ್ನು ಹಿಂದಕ್ಕೆ ತಿರುಗಿಸಿಕೊಂಡು ಹೋಗಲು ಪ್ರಾರಂಭಿಸಿದರು ತಕ್ಷಣ ಇಲಾಖಾ ಜೀಪಿನಲ್ಲಿ ಬೆನ್ನಟ್ಟಿದಾಗ ಎದರು ಭಾಗದಿಂದ ಒಂದು ಟ್ರ್ಯಾಕ್ಟರ್ ಬರುತ್ತಿದ್ದು ದ್ವಿಚಕ್ರ ವಾಹನ ಹೋಗಲು ರಸ್ತೆಯಲ್ಲಿ ಸ್ಥಳಾವಕಾಶ ಇಲ್ಲದೇ ಇದ್ದುದರಿಂದ ವಾಹನವನ್ನು ಅಲ್ಲಿಯೇ ಬಿಟ್ಟು ವಾಹನದಲ್ಲಿದ್ದ ಆಸಾಮಿಗಳು ಮತ್ತು ಟ್ರ್ಯಾಕ್ಟರ್‌ನಲ್ಲಿದ್ದ ಆಸಾಮಿಗಳು ಓಡಿ ಪರಾರಿಯಾಗಲು ಪ್ರಯತ್ನಿಸಿದಾಗ ಸಿಬ್ಬಂದಿಯವರು ಸುತ್ತುವರೆದು ನಾಲ್ಕು ಜನ ಆಸಾಮಿಗಳನ್ನು ಬಂಧಿಸಿರುತ್ತಾರೆ ನಂತರ ಟ್ರ್ಯಾಕ್ಟರ್ ಟ್ರೈಲರ್ ಮತ್ತು ದ್ವಿಚಕ್ರ ವಾಹನವನ್ನು ಪರಿಶೀಲಿಸಿದಾಗ ಟ್ರ್ಯಾಕ್ಟರ್ ಸಂಖ್ಯೆ: ಸಿಎನ್‌ಎಸ್ 5175 ಟ್ರೈಲರ್ ಸಂಖ್ಯೆ: 5176 ಆಗಿರುತ್ತದೆ ದ್ವಿಚಕ್ರ ವಾಹನ ಕೈನೆಟಿಕ್ ಚಾಲೇಂಜರ್ ನೋಂದಾವಣೆ ಸಂಖ್ಯೆ: ಕೆಎ-14 ಎಲ್-8918 ಆಗಿರುತ್ತದೆ ಟ್ರೈಲರ್ ಸಂಖ್ಯೆ: 5176 ಆಗಿರುತ್ತದೆ ದ್ವಿಚಕ್ರ ವಾಹನ ಕೈನೆಟಿಕ್ ಚಾಲೇಂಜರ್ ನೋಂದಾವಣೆ ಸಂಖ್ಯೆ: ಕೆ.14 ಎಲ್ 8918 ಆಗಿರುತ್ತದೆ ಟ್ರೈಲರ್ ಒಳಭಾಗವನ್ನು ಪರಿಶೀಲಿಸಿದಾಗ ಬೀಟೆ ಜಾತಿಯ 3 ತುಂಡುಗಳು ಸಾಗುವಾನಿ ಜಾತಿಯ 2 ತುಂಡುಗಳು ಒಟ್ಟು 5 ತುಂಡುಗಳಿರುತ್ತದೆ. ಸದರಿ ತುಂಡುಗಳಿಗೆ ಯಾವುದೇ ಛಾಪಾ ಗುರುತು ಕಂಡುಬಂದಿರುವುದಿಲ್ಲ ಈ ಬಗ್ಗೆ ಬಂಧಿಸಿದ ಅಪರಾಧಿಗಳನ್ನು ಕೇಳಲಾಗಿ ಕಾಡಿನಿಂದ ಅಕ್ರಮವಾಗಿ ಕಡಿದು ಸಾಗಿಸುತ್ತಿದ್ದುದಾಗಿ ತಿಳಿಸಿರುತ್ತಾರೆ ನಂತರ ಅವುಗಳನ್ನು ಕೆಳಗಿಳಿಸಿ ಅಳತೆ ಮಾಡಿದಾಗ 5=1.270 ಎಂ 3 ಇದ್ದು ಬಿಳಿ ಬಣ್ಣದಿಂದ ನಂಬರ್ ಕೊಟ್ಟು ಇಲಾಖಾ ಛಾಪಾ ಮುದ್ರಿಸಿ ಸ್ಥಳದಲ್ಲಿ ಪಂಚನಾಮೆಯನ್ನು ಜರುಗಿಸಿ ಅರಣ್ಯ ಮೊಕದ್ದಮೆ ದಾಖಲು ಮಾಡಿರುತ್ತದೆ ಸದರಿ ಪ್ರಕರಣವನ್ನು ಅರಣ್ಯ ಕಾಯಿದೆ 71 (ಎ) ಪ್ರಕಾರ ಕ್ರಮ ಜರುಗಿಸಲು ಈ ನ್ಯಾಯಾಲಯದಿಂದ ಮುಂದಿನ ಆದೇಶ ನೀಡುವವರೆಗೂ ವಲಯ ಅರಣ್ಯಾಧಿಕಾರಿ ಭದ್ರಾವತಿ ವಲಯ ಭದ್ರಾವತಿ ಇವರ ಸುರಕ್ಷತೆಗೆ ನೀಡಿರುತ್ತದೆ.

ದಿನಾಂಕ: 23.11.2002 ರಂದು ಶ್ರೀ ಬಿ. ಎನ್. ಶೇಷಗಿರಿ ಬಿನ್ ನಾಗೇಂದ್ರಗಿರಿ ವ್ಯವಸಾಯಗಾರರು ಬಾಬಳ್ಳಿ ಭದ್ರಾವತಿ ತಾ, ಇವರು ಈ ನ್ಯಾಯಾಲಯಕ್ಕೆ ಅರ್ಜಿಸಲ್ಲಿಸಿ ಟ್ರ್ಯಾಕ್ಟರ್ ಮತ್ತು ಟ್ರೈಲರ್ ಸಂಖ್ಯೆ: ಸಿಎನ್‌ಎಸ್ 5175-5176ರ ಆರ್‌ಸಿ ಮಾಲೀಕನಾಗಿರುತ್ತೇನೆ. ನಾನು ವ್ಯವಸಾಯಗಾರನಾಗಿದ್ದು ಸದರಿ ಟ್ರ್ಯಾಕ್ಟರ್ ಮತ್ತು ಟ್ರೈಲರ್‌ನಿಂದಲೇ ಜೀವನ ನಿರ್ವಹಣೆ ಸಾಗಿಸುತ್ತಿದ್ದೇನೆ ನನಗೂ ಈ ಪ್ರಕರಣಕ್ಕೂ ಯಾವುದೇ ಸಂಬಂಧ ಇರುವುದಿಲ್ಲ ದಯಮಾಡಿ ವಾಹನವನ್ನು ಬಿಡುಗಡೆ ಮಾಡಬೇಕಾಗಿ ಕೋರಿರುತ್ತಾರೆ. ನ್ಯಾಯಾಲಯವು ವಿಧಿಸುವ ಷರತ್ತಿಗೆ ಬದ್ದನಾಗಿರುವುದಾಗಿ ಸಹ ತಿಳಿಸಿರುತ್ತಾರೆ. ಈ ಬಗ್ಗೆ ಅರ್ಜಿದಾರರಿಗೆ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಬಿ) ಪ್ರಕಾರ ಕಾರಣ ಕೇಳಿ ತಿಳುವಳಿಕೆ ಪತ್ರ ನೀಡಿರುತ್ತದೆ ಅರ್ಜಿದಾರರು ದಿನಾಂಕ: 11.12.2002 ರಂದು ಸಮಜಾಯಿಸಿ ನೀಡಿರುತ್ತಾರೆ ಸದರಿ ವಾಹನವನ್ನು ಸ್ವಂತ ಜಮೀನು ಕೆಲಸಕ್ಕಾಗಿ ಉಪಯೋಗಿಸುತ್ತಿದ್ದು ನಾನು ಭದ್ರಾವತಿ ತಾ, ಬಾಬಳ್ಳಿಯಲ್ಲಿ ವಾಸವಾಗಿರುತ್ತೇನೆ ನನ್ನ ಸ್ವಂತ ಜಮೀನು ಸಹ ಸದರಿ ಪ್ರದೇಶದಲ್ಲಿರುತ್ತದೆ ಘಟನೆ ದಿವಸ ವಾಹನವನ್ನು ಬಾಬಳ್ಳಿ ಗ್ರಾಮದಲ್ಲಿರುವ ಕೆಲವು ಮುಸ್ಲಿಂ ಮುಖಂಡರು ರಂಜಾನ್ ಹಬ್ಬದ ಸಂಬಂಧ ಸೌದೆ ತರುವುದಾಗಿ ಡ್ರೈವರ್ ಸಂಗಡ ತೆಗೆದುಕೊಂಡು ಹೋಗಿರುತ್ತಾರೆ ಸದರಿ ವ್ಯಕ್ತಿಗಳು ಕಾಡಿನಲ್ಲಿ ಸಾಗುವಾನಿ ಬೀಟೆ ತುಂಡುಗಳು ಅಕ್ರಮ ಸಾಗಿಸಿರುವುದು ವಾಹನ ಅಮಾನತ್ತುಪಡಿಸಿದ ನಂತರ ತಿಳಿದಿರುತ್ತದೆ ಸದರಿ ಕೃತ್ಯಕ್ಕೂ ನನಗೂ ಯಾವುದೇ ಸಂಬಂಧ ಇರುವುದಿಲ್ಲ ನಾನು ನಿಃಶ್ಯಕ್ತನಾಗಿದ್ದು ಇದುವರೆಗೂ ಯಾವುದೇ ಅಪರಾದದಲ್ಲೂ ವಾಹನವು ಸಿಲುಕದೆ ಸಮಾಜದಲ್ಲಿ ಒಳ್ಳೆಯ ವ್ಯಕ್ತಿತ್ವ ಹೊಂದಿದವನಾಗಿರುತ್ತೇನೆ. ಸದರಿ ವಾಹನವು ಅರಣ್ಯ ಕಛೇರಿಯ ಆವರಣದ ಬಯಲಿನಲ್ಲಿರುವುದರಿಂದ ಉಪಯೋಗಕ್ಕೆ ಬಾರದಂತೆ ಆಗುತ್ತದೆ. ಅಲ್ಲದೆ ಸದರಿ ವಾಹನವು ನನ್ನ ಕೃಷಿ ಕೆಲಸಕ್ಕೆ ಅಗತ್ಯವಾಗಿ ಬೇಕಾಗಿರುತ್ತದೆ ಮಾನ್ಯ ನ್ಯಾಯಾಲಯವು ವಿಧಿಸುವ ಷರತ್ತಿಗೆ ಬದ್ದನಾಗಿರುತ್ತೇನೆ ದಯಮಾಡಿ ವಾಹನವನ್ನು ಬಿಡುಗಡೆ ಮಾಡಬೇಕಾಗಿ ಕೋರಿರುತ್ತಾರೆ.

ದಿನಾಂಕ: 8.1.2003 ರಂದು ಸಹಾಯಕ ಸರ್ಕಾರಿ ಅಭಿಯೋಜಕರು ಆಕ್ಷೇಪಣೆ ಪತ್ರ ಸಲ್ಲಿಸಿ ಭದ್ರಾವತಿ ವಲಯದ ಅರಣ್ಯ ಸಿಬ್ಬಂದಿ ವರ್ಗದವರು ಅತ್ತಿಗುಂದದಿಂದ ಬೆಳ್ಳಿಗೆರೆಗೆ ಹೋಗುವ ರಸ್ತೆಯ ಸೀಗೆಹಳ್ಳದ ಸಮೀಪ ಇರುವ ಡಿ ಲೈನ್ ಹತ್ತಿರ ಯಾವುದೇ ಪರವಾನಿಗೆಯಿಲ್ಲದೇ ಅರಣ್ಯ ಉತ್ಪನ್ನ ಸಾಗಾಣಿಕೆ ಮಾಡುತ್ತಿದ್ದು ಟ್ರ್ಯಾಕ್ಟರ್ ಟ್ರೈಲರ್ ಸಂಖ್ಯೆ: ಸಿ.ಎನ್.ಎಸ್. 5175-5176ನ್ನು ವಶಪಡಿಸಿಕೊಂಡಿರುತ್ತಾರೆ ಅರ್ಜಿದಾರರು ವಾಹನದ ಉಸ್ತುವಾರಿಯನ್ನು ಸರಿಯಾಗಿ ನಿರ್ವಹಿಸಿರುವುದಿಲ್ಲ ಅಲ್ಲದೇ ವಾಹನದಲ್ಲಿ ಅಪರಾಧಿಗಳನ್ನು ಬಂಧಿಸಿದ್ದು ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ ದಾಖಲು ಮಾಡಿದ್ದು ವಿಚಾರಣೆ ಬಾಕಿಯಿರುತ್ತದೆ ವಾಹನವನ್ನು ಬಿಡುಗಡೆ ಮಾಡಿದಲ್ಲಿ ಪುನಃ ಅಕ್ರಮ ಸಾಗಾಣಿಕೆಗೆ ಬಳಸುವ ಸಾಧ್ಯತೆ ಇರುತ್ತದೆ

ಅರ್ಜಿದಾರರಿಗೆ ವಾಹನವನ್ನು ಬಿಡುಗಡೆ ಮಾಡಲು ಯಾವುದೇ ಕಾರಣಗಳು ಇರುವುದಿಲ್ಲ ಕಾರಣ ಅರ್ಜಿದಾರರ ಅರ್ಜಿಯನ್ನು ವಜಾಮಾಡಬೇಕಾಗಿ ವಿನಂತಿಸಿರುತ್ತಾರೆ.

ಮೇಲ್ಕಂಡ ಪ್ರಕರಣದಲ್ಲಿ ಅರ್ಜಿದಾರರ ಮಧ್ಯಂತರ ಅರ್ಜಿ ಹಾಗೂ ಸರ್ಕಾರದ ಅಭಿಯೋಜನೆ ಪರ ಸಹಾಯಕ ಸರ್ಕಾರಿ ಅಭಿಯೋಜಕರು ಸಲ್ಲಿಸಿದ ಆಕ್ಷೇಪಣೆ ಬಗ್ಗೆ ಹಾಗೂ ಪ್ರಕರಣದ ದಾಖಲಾತಿಗಳನ್ನು ಅವಲೋಕಿಸಿ ನೋಡಿದಾಗ ವಾಹನದ ಮಾಲೀಕರು/ ಅರ್ಜಿದಾರರು ವ್ಯವಸಾಯಗಾರರಾಗಿದ್ದು ಅವರ ಜೀವನ ನಿರ್ವಹಣೆಯಿಂದ ಮೇಲುನೋಟಕ್ಕೆ ಕಂಡು ಬಂದಿರುತ್ತದೆ ಹಾಗೂ ಅವರ ಪಾತ್ರದ ಬಗ್ಗೆ ಎಲ್ಲೂ ಸಹ ದಾಖಲಾತಿಗಳಲ್ಲಿ ಹಾಲಿ ಕಂಡು ಬರುತ್ತಿಲ್ಲ ಹಾಗೂ ಪ್ರಕರಣದ ಬಗ್ಗೆ ಪೂರ್ಣ ತನಿಖೆ ಅವಶ್ಯಕತೆಯಿರುತ್ತದೆ ಹಾಗೂ ವಾಹನ ಬಿಸಿಲು ಮಳೆ ಗಾಳಿಗೆ ಸಿಕ್ಕಿ ಹಾಳಾಗುವ ಸಾಧ್ಯತೆಯ ದೃಷ್ಟಿಯಿಂದ ನ್ಯಾಯಾಲಯವು ವಿಧಿಸುವ ಷರತ್ತಿಗೆ ಬದ್ಧನಾಗಿರುವುದಾಗಿ ವಾಹನವನ್ನು ತಾತ್ಕಾಲಿಕ ವಶಕ್ಕೆ ಬಿಡುಗಡೆ ಕೋರಿದ ಬಗ್ಗೆ ಸರ್ಕಾರ ಅಭಿಯೋಜಕರ ಹಾಗೂ ಅರ್ಜಿದಾರರ ಪರ ವಕೀಲರ ವಾದವನ್ನು ಆಲಿಸಿ ಪ್ರಕರಣಕ್ಕೆ ಸಂಬಂಧಪಟ್ಟ ವಾಹನದ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ನೀಡಿದ ಬೆಲೆಗೆ ರಾಷ್ಟ್ರೀಕೃತ ಬ್ಯಾಂಕ್ ಗ್ಯಾರಂಟಿ ಹಾಗೂ ಅದೇ ಮೌಲ್ಯಕ್ಕೆ ಒಬ್ಬ ಜಮೀನ್ದಾರರನ್ನು ದಾಖಲಾತಿಗಳ ಸಮೇತ ಒಪ್ಪಿಸಲು ಸೂಚಿಸಿ ವಾಹನವನ್ನು ತಾತ್ಕಾಲಿಕ ಬಿಡುಗಡೆ ಮಾಡಲು ದಿನಾಂಕ: 14.2.2003 ರಂದು ಆದೇಶ ಹೊರಡಿಸಿರುತ್ತದೆ. ವಾಹನದ ಮಾಲೀಕರು 48,200-00 ರೂ.ಗಳಿಗೆ ಬ್ಯಾಂಕ್ ಗ್ಯಾರಂಟಿ ಮತ್ತು ಜಾಮೀನ್ದಾರರನ್ನು ದಾಖಲಾತಿಗಳ ಸಮೇತ ಹಾಜರುಪಡಿಸಿ ವಾಹನವನ್ನು ತಾತ್ಕಾಲಿಕ ವಶಕ್ಕೆ ಪಡೆದಿರುತ್ತಾರೆ.

ಈ ಪ್ರಕರಣದ ಬಗ್ಗೆ ಅಂತಿಮ ಆದೇಶ ಹೊರಡಿಸಲು ದಿನಾಂಕ: 3.3.2004 ರಿಂದ 22.9.2004ರ ವರೆಗೆ ವಿವಿಧ ದಿನಾಂಕಗಳಂದು ವಿಚಾರಣೆ ನಡೆಸಿರುತ್ತದೆ. ಅಭಿಯೋಜನಾ ವತಿಯಿಂದ ದಿನಾಂಕ: 9.6.2004 ರಂದು ಶ್ರೀ ಜಿ. ಎಸ್. ಮಲ್ಲಿಕಾರ್ಜುನ ವನಪಾಲಕ ಪಿಡಬ್ಲ್ಯೂ-1 ಸಾಕ್ಷಿದಾರರಾಗಿ ಶ್ರೀ ಮೋಹನ್ ಕುಮಾರ್ ವನಪಾಲಕ ಪಿಡಬ್ಲ್ಯೂ-2 ಸಾಕ್ಷಿದಾರರಾಗಿ ಹೇಳಿಕೆ ನೀಡಿರುತ್ತಾರೆ ದಿನಾಂಕ: 21.7.2004 ರಂದು ಶ್ರೀ ಬಿ.ಎನ್. ಶೇಷಗಿರಿ ಬಿನ್ ನಾಗೇಂದ್ರಗಿರಿ ವಾಹನದ ಮಾಲೀಕರು ಡಿಡಬ್ಲ್ಯೂ-1 ಸಾಕ್ಷಿದಾರರಾಗಿ ಪ್ರತಿವಾದಿಗಳ ಪರ ವಿಚಾರಣೆ ನೀಡಿ ಹೇಳಿಕೆ ದಾಖಲಿಸಿಕೊಳ್ಳಲಾಯಿತು.

ಪ್ರಾಧಿಕಾರಕ್ಕೆ ಹಾಜರುಪಡಿಸಿದ ದಾಖಲಾತಿಗಳನ್ನು ಪರಿಶೀಲಿಸಲಾಯಿತು ಹಾಗೂ ಅರ್ಜಿದಾರರುಗಳ ಪರವಾಗಿ ನ್ಯಾಯವಾದಿಗಳು ಮಂಡಿಸಿದ ವಾದ ಹಾಗೂ ಫಿರ್ಯಾದಿದಾರರ ಪರ ಸಹಾಯಕ ಸರ್ಕಾರಿ ಅಭಿಯೋಜಕರು ಮಂಡಿಸಿದ ವಾದ ವಿವಾದವನ್ನು ಆಲಿಸಲಾಯಿತು.

ಈ ಪ್ರಕರಣದಲ್ಲಿ ವಾಸ್ತಾವಾಂಶ ಮತ್ತು ಕಾನೂನಿನ ವಸ್ತು ಸ್ಥಿತಿ ಹಾಗೂ ಲಭ್ಯವಿದ್ದ ವಿಷಯ ಸಾಮಾಗ್ರಿಗಳ ತಳಹದಿಯ ಮೇಲೆ ಗಮನಿಸಿ ಪರಿಗಣಿಸಬೇಕಾದ ಅಂಶಗಳು ಈ ಕೆಳಗಿನಂತಿವೆ.

1. ಅರ್ಜಿದಾರರ ಟ್ರ್ಯಾಕ್ಟರ್ ಮತ್ತು ಟ್ರೈಲರ್ ಸಿಎನ್‌ಎಸ್ 5175-5176 ರಲ್ಲಿ ಬೀಟೆ ತುಂಡುಗಳು 3=1.101 ಎಂ3 ಹಾಗೂ ಸಾಗುವಾನಿ ತುಂಡುಗಳು 2=0.159 ಎಂ3 ನ್ನು ದಿನಾಂಕ: 7.11.2002 ರಂದು ಕಾನೂನಿಗೆ ವಿರುದ್ಧವಾಗಿ ಸಾಗಿಸಲು ಉಪಯೋಗಿಸಲಾಗಿತ್ತೇ ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮ ಉಲ್ಲಂಘಿಸಲಾಗಿದೆಯೇ?
2. ಕರ್ನಾಟಕ ಅರಣ್ಯ ವಿಧಿ 71 (ಬಿ)ರ ಪ್ರಕಾರ ವಾಹನದ ಮಾಲೀಕರವರಿಗೆ ಕಾರಣ ಕೇಳಿ ನೋಟೀಸ್ ನೀಡಲಾಗಿದೆಯೇ ಹಾಗೂ ಮಾಲೀಕರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?
3. ಟ್ರ್ಯಾಕ್ಟರ್ ಮತ್ತು ಟ್ರೈಲರ್ ಮಾಲೀಕರು ಅಥವಾ ಕೆಲಸಗಾರರು ಅಥವಾ ಅವರ ಪ್ರತಿನಿಧಿಗಳು ಲಾರಿಯಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಅರಣ್ಯ ಉತ್ಪನ್ನವನ್ನು ಸಾಗಿಸಲು ಶಾಮೀಲಾಗಿದ್ದಾರೆಯೇ? ಹಾಗೂ ವಾಹನದ ಮಾಲೀಕರ ಅಥವಾ ಮಾಲೀಕರ ಪ್ರತಿನಿಧಿಗಳ ಗಮನಕ್ಕೆ ಬಾರದಂತೆಯೇ ವಾಹನವನ್ನು ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆಗೆ ಉಪಯೋಗಿಸಲಾಗಿದೆಯೇ? ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನುಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು ಅದರ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿರುತ್ತಾರೆಯೇ?
4. ಈ ಪ್ರಕರಣದಲ್ಲಿ ಫಿರ್ಯಾದಿದಾರರು ಅಮಾನತ್ತುಪಡಿಸಿದ ಅರಣ್ಯ ಉತ್ಪನ್ನಗಳ ಮಾಲೀಕತ್ವ ಕರ್ನಾಟಕ ಕಾಯಿದೆಯಂತೆ ಸರ್ಕಾರಿ ಸ್ವತ್ತೆಂದು ಅಭಿಯೋಗವು ರುಜುವಾತುಪಡಿಸಿದೆಯೇ?
5. ಪ್ರಕರಣದಲ್ಲಿ ಅಮಾನತ್ತುಪಡಿಸಿದ ವಾಹನ ಹಾಗೂ ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?
6. ಏನು ತೀರ್ಮಾನಕ್ಕೆ ಬರಬಹುದಾಗಿದೆ.

ಈ ಮೇಲ್ಕಂಡ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ ಅದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ನೀಡಲಾಗಿದೆ.

1. ಒಂದನೇ ಅಂಶಕ್ಕೆ ಹೌದು ಎಂತಲೂ
2. ಎರಡನೇ ಅಂಶಕ್ಕೆ ಹೌದು ಎಂತಲು
3. ಮೂರನೇ ಅಂಶಕ್ಕೆ ಮೊದಲನೆ ಭಾಗದ ಪ್ರಶ್ನೆಗೆ ಹೌದು ಎಂದು ಎರಡನೇ ಭಾಗದ ಪ್ರಶ್ನೆಗೆ ಇಲ್ಲ ಎಂದಾಗಿರುತ್ತದೆ.
4. ನಾಲ್ಕನೇ ಅಂಶಕ್ಕೆ ಹೌದು ಎಂತಲು
5. ಐದನೇ ಅಂಶಕ್ಕೆ ಹೌದು ಎಂತಲು ಈ ಕೆಳಗಿನ ಕಾರಣಗಳಿಂದ ತೀರ್ಮಾನಕ್ಕೆ ಬರಲಾಗಿದೆ.

**ಕಾರಣಗಳು**

**ಅಂಶ-1**

ಫಿರ್ಯಾದಿದಾರರು ವಲಯ ಅರಣ್ಯಾಧಿಕಾರಿ ಭದ್ರಾವತಿ ವಲಯ ಭದ್ರಾವತಿರವರು ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಈ ಪ್ರಾಧಿಕಾರಕ್ಕೆ ಹಾಜರುಪಡಿಸಿದ ದಿನಾಂಕ: 7.11.2002ರ ಪ್ರಥಮ ವರ್ತಮಾನ ವರದಿ (ಪ್ರಾಸಾ-2) ಮಹಜರ್ (ಪ್ರಾಸಾ-1) ಹಾಗೂ ಸೀಜರ್ ರಿಪೋರ್ಟ್‌ಗಳಿಂದ ದಿನಾಂಕ: 7.11.2002 ರಾತ್ರಿ 2.00 ಗಂಟೆ ಸುಮಾರಿಗೆ ಅತ್ತಿಗುಂದ ಬೆಳ್ಳಿಗೆರೆ ರಸ್ತೆ ಸೀಗೇಹಳ್ಳದ ಬಳಿ ನೋಂದಣಿ ಸಂಖ್ಯೆ: ಸಿಎನ್‌ಎಸ್ 5175/76 ಟ್ರ್ಯಾಕ್ಟರ್ ಮತ್ತು ಟ್ರೈಲರ್‌ನಲ್ಲಿ ಕುಕ್ಕುವಾಡ ಉಬ್ರಾಣಿ ಮನ್ನಾ ಜಂಗ್ಲಿ ಆಲ್ ಇಂಡಿಯಾ ನೆಡುತೋಪಿನಲ್ಲಿ ಕಡಿದು ತಯಾರಿಸಿದ ಬೀಟೆ ಹಾಗೂ ಸಾಗುವಾನಿ ತುಂಡುಗಳು 5=1.270 ಎಂ 3 ಹಾಗೂ 300 ಕೆ.ಜಿ. ಪ್ರಮಾಣದ ಸೌದೆಯನ್ನು ದುಷ್ಕರ್ಮಿಗಳು ಅಕ್ರಮವಾಗಿ ಸಾಗಿಸುತ್ತಿದ್ದನ್ನು ಅರಳಿಹಳ್ಳಿ ಶಾಖೆಯ ನವಪಾಲಕರ ಹಾಗೂ ಅವರ ಸಿಬ್ಬಂದಿಗಳು ಪತ್ತೆ ಹಚ್ಚಿ ಅರಣ್ಯ ಕಾಯಿದೆ ಪ್ರಕಾರ ಅರಣ್ಯ ಮೊಕದ್ದಮೆ ಸಂಖ್ಯೆ: 195/02-03ನ್ನು ದಿನಾಂಕ: 7.11.2002 ರಂದು ದಾಖಲಿಸಿರುವುದು ದೃಢಪಟ್ಟಿರುತ್ತದೆ ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಈ ಪ್ರಾಧಿಕಾರದಲ್ಲಿ ದಿನಾಂಕ: 9.6.2004 ರಂದು

ಶ್ರೀ ಮೋಹನ್ ಕುಮಾರ್ ನವಪಾಲಕ ಅರಳಿಹಳ್ಳಿ ಶಾಖೆ ಇವರು ಪಿಡಬ್ಲ್ಯೂ-1 ಹಾಗೂ ಶ್ರೀ ಜಿ. ಎಸ್. ಮಲ್ಲಿಕಾರ್ಜುನ ವನಪಾಲಕ ಭದ್ರಾವತಿ ವಲಯ ಇವರು ಪಿಡಬ್ಲ್ಯೂ-2 ಸಾಕ್ಷಿದಾರರಾಗಿ ಹೇಳಿಕೆ ನೀಡಿರುತ್ತಾರೆ ಅವರುಗಳ ಹೇಳಿಕೆಯಂತೆ ದಿನಾಂಕ: 7.11.2002 ರಂದು ಬಂದ ಖಚಿತ ವರ್ತಮಾನದ ಮೇರೆಗೆ ಅತ್ತಿಗುಂದ ಗ್ರಾಮಕ್ಕೆ ಹೋಗಿ ಅತ್ತಿಗುಂದ ಬೆಳ್ಳಿಗೆರೆಗೆ ಹೋಗುವ ರಸ್ತೆಯಲ್ಲಿ ಗಸ್ತು ಮಾಡುತ್ತಿದ್ದೆವು ಆಗ ರಾತ್ರಿ 2.45 ಗಂಟೆಯಾಗಿತ್ತು ಅಂದರೆ 7.11.2003 ರ ಬೆಳಗಿನ ಜಾವ ಆಗಿತ್ತು ಆಗ ಬೆಳ್ಳಿಗೆರೆ ಕಡೆಯಿಂದ ಒಂದು ದ್ವಿಚಕ್ರವಾಹನ ಬಂತು ಅದನ್ನು ನಿಲ್ಲಿಸಲು ಸೂಚನೆ ನೀಡಿದಾಗ ಅದು ವಾಪಸ್ಸು ಹೊರಟು ಹೋಯಿತು ನಂತರ ಜೀಪಿನಲ್ಲಿ ಬೆನ್ನಟ್ಟಿ ಹೋದೆವು ಆ ಸಮಯದಲ್ಲಿ ಎದುರು ದಿಕ್ಕಿನಿಂದ ಒಂದು ಟ್ರ್ಯಾಕ್ಟರ್ ಬಂದಿತು ಟ್ರ್ಯಾಕ್ಟರ್ ಮತ್ತು ಬೈಕ್ ಒಂದೇ ಜಾಗದಲ್ಲಿ ನಿಂತಿತು ಟ್ರ್ಯಾಕ್ಟರ್ ನಲ್ಲಿದ್ದ ಜನರು ಮತ್ತು ಬೈಕ್‌ನಲ್ಲಿದ್ದ ಸವಾರರು ತಪ್ಪಿಸಿಕೊಳ್ಳಲು ಪ್ರಯತ್ನಿಸಿದರು ಒಟ್ಟು 4 ಜನರನ್ನು ಹಿಡಿದುಕೊಂಡೆವು, ಮುಕ್ತಿಯಾರ್, ಈಶ್ವರಗಿರಿ, ಇನ್ನು ಎರಡು ಜನರು ಈಗ ಅವರ ಹೆಸರು ಜ್ಞಾಪಕವಿಲ್ಲ ಟ್ರ್ಯಾಕ್ಟರ್ ನಲ್ಲಿ ಬೀಟೆ ಮತ್ತು ಸಾಗುವಾನಿ ತುಂಡುಗಳು ಇದ್ದವು ನಿಲ್ಲಿಸಿ ಓಡಿ ಹೋದ ಬೈಕ್ ಕೈನೆಟಿಕ್ ಚಾಲೆಂಜರ್ ಆಗಿದೆ. ಟ್ರ್ಯಾಕ್ಟರ್ ನಂ. ಸಿ.ಎನ್.ಎಸ್. 5175 ಹಾಗೂ ಟ್ರೈಲರ್ ಸಂಖ್ಯೆ: 5176 ಆಗಿರುತ್ತದೆ ಬೈಕ್ ನಂ. ಕೆಎ-14 ಎಲ್ 8918 ಆಗಿರುತ್ತದೆ ನಂತರ ಟ್ರ್ಯಾಕ್ಟರ್ ಮತ್ತು ಟ್ರೈಲರ್‌ನಲ್ಲಿದ್ದ 3 ಬೀಟೆ ತುಂಡುಗಳು 2 ಸಾಗುವಾನಿ ತುಂಡುಗಳನ್ನು ಅಳತೆ ಮಾಡಿ ಇಲಾಖಾ ಛಾಪಾ ಮುದ್ರಿಸಿ ಕ್ರಮ ಸಂಖ್ಯೆ ನೀಡಿ ಅಮಾನತ್ತು ಪಡಿಸಿಕೊಳ್ಳಲಾಯಿತು ನಂತರ ಸ್ಥಳದಲ್ಲಿ ಮಹಜರ್ ಕ್ರಮ ಜರುಗಿಸಿ ವಲಯ ಅರಣ್ಯಾಧಿಕಾರಿ ಕಛೇರಿಯಿಂದ ನಿಸ್ತಂತುವಿನ ಮೂಲಕ ಅರಣ್ಯ ಮೊಕದ್ದಮೆ ಸಂಖ್ಯೆ: 195/2002-03 ನ್ನು ಪಡೆದು ದಾಖಲಿಸಲಾಯಿತು ಸದರಿ ಮಹಜರನ್ನು ನಿಶಾನೆ ಪಿ1 ಎಂದು ಗುರುತಿಸಿರುತ್ತದೆ ಸಾಕ್ಷಿಯ ರುಜುವನ್ನು ನಿಶಾನೆ ಪಿ1ಎ ಮತ್ತು ಪಿ1ಬಿ ಎಂದು ಗುರುತಿಸಿರುತ್ತದೆ. ಟ್ರ್ಯಾಕ್ಟರ್ ಮತ್ತು ಟ್ರೈಲರ್ ಬೈಕ್ ಹಾಗೂ ಟ್ರ್ಯಾಕ್ಟರ್‌ನಲ್ಲಿದ್ದ ಅರಣ್ಯ ಉತ್ಪನ್ನಗಳನ್ನು ವಲಯ ಅರಣ್ಯಾಧಿಕಾರಿ ಕಛೇರಿಗೆ ತಂದು ಪ್ರಥಮ ಮಾಹಿತಿ ವರ್ತಮಾನ ದಾಖಲಿಸಿದ್ದು ಸದರಿ ವರದಿ ನಿಶಾನೆ ಪಿ2 ಆಗಿದ್ದು ಅದರಲ್ಲಿರುವ ಸಹಿಯನ್ನು ಪಿ2ಎ ಆಗಿರುತ್ತದೆ ಸೀಜರ್ ರಿಪೋರ್ಟ್ ನಿಶಾನೆ ಪಿ3 ಆಗಿರುತ್ತದೆ ಅದರಲ್ಲಿರುವ ಸಹಿಯನ್ನು ನಿಶಾನೆ ಪಿ3ಎ ಆಗಿರುತ್ತದೆ ಆರೋಪಿಗಳನ್ನು ನ್ಯಾಯಾಲಯದ ಮುಂದೆ ಹಾಜರುಪಡಿಸಲಾಯಿತು ಟ್ರ್ಯಾಕ್ಟರ್ ಮತ್ತು ಟ್ರೈಲರ್ ಮೋಟರ್ ಸೈಕಲ್ ಮತ್ತು ಮರದ ತುಂಡುಗಳನ್ನು ನೋಡಿದರೆ ಗುರುತಿಸುತ್ತೇನೆ ಎಂದು ಹೇಳಿಕೆ ನೀಡಿರುತ್ತಾರೆ.

ಅರ್ಜಿದಾರರ ಪರ ವಕೀಲರು ಮಾಡಿದ ಪಾಟೀಸವಾಲಿನಲ್ಲಿ ಟ್ರ್ಯಾಕ್ಟರ್ ಅಮಾನತ್ತುಪಡಿಸಿಕೊಂಡ ಸಂದರ್ಭದಲ್ಲಿ ಟ್ರ್ಯಾಕ್ಟರ್ ಮಾಲೀಕರು ಯಾರೆಂದು ಗೊತ್ತಿರಲಿಲ್ಲ ಮರಕಡಿಯುವ ಸಾಧನಗಳು ಯಾವುದು ಸಿಗಲಿಲ್ಲ ಮರವನ್ನು ಅರಣ್ಯದಲ್ಲಿ ಯಾವ ಸರ್ವೆ ನಂಬರ್‌ನಿಂದ ಕಡಿದಿದ್ದಾರೆ ಎಂದು ಹೇಳಲು ಬರುವುದಿಲ್ಲ ಸದರಿ ಮರದ ತುಂಡುಗಳು ಅರಣ್ಯ ಇಲಾಖೆಗೆ ಸೇರಿದವುಗಳಾಗಿತ್ತು ಕಡಿತಲೆ ಮಾಡಲ್ಪಟ್ಟ ಮರದ ಬುಡಗಳ ಬಗ್ಗೆ ಯಾವುದೇ ಮಹಜರ್‌ನ್ನು ಮಾಡಿರುವುದಿಲ್ಲ ಬೈಕಿನಲ್ಲಿ ಹೋದ ಇಬ್ಬರು ವ್ಯಕ್ತಿಗಳ ಪೈಕಿ ಒಬ್ಬನ ಹೆಸರು ಗೊತ್ತಿದ್ದು ಆತನು ಮುಕ್ತಿಯಾರ್ ಆಗಿರುತ್ತಾನೆ ಟ್ರ್ಯಾಕ್ಟರ್ ವಶಪಡಿಸಿಕೊಂಡ ಸಂದರ್ಭದಲ್ಲಿ ಟ್ರ್ಯಾಕ್ಟರ್ ಮಾಲೀಕರು ಇದ್ದರು ಇಲ್ಲವೋ ಎಂದು ಹೇಳಲು ಬರುವುದಿಲ್ಲ ಆದರೆ ಟ್ರ್ಯಾಕ್ಟರ್‌ನ್ನು ಈಶ್ವರಗಿರಿ ಎಂಬುವನು ಚಲಾಯಿಸುತ್ತಿದ್ದ ಮಹಜರ್‌ನ್ನು ವಲಯ ಅರಣ್ಯಾಧಿಕಾರಿ ಕಛೇರಿಯಲ್ಲಿ ತಯಾರಿಸಲ್ಪಟ್ಟಿದ್ದು ಎಂದು ಹೇಳುವುದು ಸರಿಯಲ್ಲ ಈ ಪ್ರಕರಣದಲ್ಲಿ ವಾಹನದ ಮಾಲೀಕರ ಪಾತ್ರ ಇರುವುದಿಲ್ಲ ಎಂದು ಕೇಳಿದ ಪ್ರಶ್ನೆಗೆ ಟ್ರ್ಯಾಕ್ಟರ್ ಮಾಲೀಕರದ್ದೆ ಆಗಿದ್ದು ಕಾರಣ ಕೃತ್ಯಕ್ಕೆ ಟ್ರ್ಯಾಕ್ಟರ್ ಮಾಲೀಕರೆ ಕಾರಣ ಎಂದು ಸಾಕ್ಷಿ ಹೇಳಿರುತ್ತಾರೆ ಈ ಘಟನೆಗೂ ಟ್ರ್ಯಾಕ್ಟರ್ ಮಾಲೀಕರಿಗೂ ಯಾವುದೇ ಸಂಬಂಧ ಇಲ್ಲ ನೀವು ಸುಳ್ಳು ಕೇಸನ್ನು ಹಾಕಿರುತ್ತೀರಿ ಎಂಬ ಪ್ರಶ್ನೆಗೆ ಸದರಿ ವಿಷಯ ಸತ್ಯಕ್ಕೆ ದೂರವಾಗಿದ್ದು ಎಂದು ಸಾಕ್ಷಿದಾರರು ಹೇಳಿರುತ್ತಾರೆ.

ಮೇಲ್ಕಂಡ ಎಲ್ಲಾ ಸಾಕ್ಷಿದಾರರ ಹೇಳಿಕೆಗಳನ್ನು ಗಮನಿಸಿದಾಗ ಈ ಪ್ರಕರಣಕ್ಕೆ ಸಂಬಂಧಿಸಿದ ಟ್ರ್ಯಾಕ್ಟರ್‌ನಲ್ಲಿ ಅಕ್ರಮ ಸಾಗುವಾನಿ ಬೀಟೆ ತುಂಡುಗಳು ಸಾಗಾಣಿಕೆ ಆಗಿರುವುದು ದೃಢಪಟ್ಟಿರುತ್ತದೆ ಸಾಕ್ಷಿದಾರರು ನೀಡಿದ ಹೇಳಿಕೆಗಳು ಹಾಗೂ ಸ್ಥಳ ಪಂಚನಾಮೆಯಲ್ಲಿರುವ ಅಂಶಗಳು ಒಂದಕ್ಕೊಂದು ತಾಳೆ ಹೊಂದಿದ್ದು ಯಾವುದೇ ವ್ಯತಿರಿಕ್ತ ಹೇಳಿಕೆಗಳು ಬಂದಿರುವುದಿಲ್ಲ ಅವರುಗಳು ನುಡಿದ ಸಾಕ್ಷಿಯು ನಂಬುವಂತಾಗಿರುತ್ತದೆ. ಅಲ್ಲದೇ ಪಾಟೀ ಸವಾಲಿನಲ್ಲಿಯೂ ಸಹ ಅರ್ಜಿದಾರರ ಪರ ವಕೀಲರು ಕೇಳಿದ ಪ್ರಶ್ನೆಗೆ ಸೂಕ್ತವಾದ ಉತ್ತರವನ್ನು ನೀಡಿರುತ್ತಾರೆ ಹಾಗೂ ವಾಹನದ ಮಾಲೀಕರ ವಾಹನದಲ್ಲಿ ಅಕ್ರಮವಾಗಿ ಸಾಗುವಾನಿ ಬೀಟೆ ತುಂಡುಗಳು ಸಾಗಾಣಿಕೆಗೆ ಬಳಸಿರುವುದು ದೃಢಪಟ್ಟಿರುತ್ತದೆ ಹಾಗೂ 1963ನೇ ಕರ್ನಾಟಕ ಅರಣ್ಯ ವಿಧಿ 24 (ಇ) 50,62,80,104,104 (ಎ) (ಡಿ) 71ಎ ಮತ್ತು ರೂಲ್ 144,165 ಕೆಎಫ್ ಆರ್ 1969 ನಿಯಮವನ್ನು ಉಲ್ಲಂಘಿಸಲಾಗಿರುತ್ತದೆ ಈ ಮೇಲಿನ ಅಂಶ ಹಾಗೂ ಕಾರಣಗಳಿಂದ ಒಂದನೇ ಅಂಶಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

**ಅಂಶ-2**

ಈ ಪ್ರಕರಣದಲ್ಲಿ ಅಮಾನತ್ತುಪಡಿಸಿದ ಟ್ರ್ಯಾಕ್ಟರ್ ಮತ್ತು ಟ್ರೈಲರ್ ಸಿ. ಎನ್. ಎಸ್ 5175/76ರ ವಾಹನದ ಮಾಲೀಕರು ಶ್ರೀ ಬಿ. ಎನ್. ಶೇಷಗಿರಿ ಬಿನ್ ನಾಗೇಂದ್ರಗಿರಿ ಬಾಬಳ್ಳಿ ಭದ್ರಾವತಿ ಇವರು ದಿನಾಂಕ: 23.11.2002 ರಂದು ಈ ಪ್ರಾಧಿಕಾರದಲ್ಲಿ ವಾಹನವನ್ನು ಮಧ್ಯಂತರ ಸ್ವಾಧೀನಕ್ಕೆ ಬಿಡುಗಡೆ ಮಾಡಲು ಕೋರಿ ಅರ್ಜಿಸಲ್ಲಿಸಿದ್ದು ದಿನಾಂಕ: 2.12.2002 ರಂದು ವಾಹನದ ಮಾಲೀಕರಿಗೆ ಅರಣ್ಯ ಕಾಯಿದೆ 71 (ಬಿ) ಪ್ರಕಾರ ಕಾರಣ ಕೇಳಿ ತಿಳುವಳಿಕೆ ಪತ್ರ ನೀಡಿರುತ್ತದೆ ಮತ್ತು ದಿನಾಂಕ: 14.2.2003 ರಂದು ಅರ್ಜಿದಾರರ ಅರ್ಜಿಯನ್ನು ಪುರಸ್ಕರಿಸಿ ತಾತ್ಕಾಲಿಕವಾಗಿ ವಾಹನವನ್ನು ಬಿಡುಗಡೆ ಮಾಡಿರುತ್ತದೆ. ಅಲ್ಲದೇ ತದ ನಂತರ ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಈ ಪ್ರಾಧಿಕಾರದಲ್ಲಿ ನಡೆದ ವಿಚಾರಣೆಗೆ ಅರ್ಜಿದಾರರು ಹಾಗೂ ಅವರ ನ್ಯಾಯವಾದಿಗಳು ಹಾಜರಾಗಿರುತ್ತಾರೆ ಆದ ಕಾರಣ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ) ಪ್ರಕಾರ ಆರ್.ಸಿ. ಮಾಲೀಕರವರಿಗೆ ಅವಕಾಶ ನೀಡಿರುವುದಾಗಿ ತೀರ್ಮಾನಿಸಿರುತ್ತೇನೆ ಆದ ಕಾರಣ ಅಂಶ 2 ಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

**ಅಂಶ-3**

ವಾಹನದ ಆರ್. ಸಿ. ಮಾಲೀಕರಾದ ಶ್ರೀ ಬಿ. ಎನ್. ಶೇಷಗಿರಿ ಬಿನ್ ನಾಗೇಂದ್ರಗಿರಿ ಬಾಬಳ್ಳಿ, ಭದ್ರಾವತಿ ತಾ., ಇವರು ದಿನಾಂಕ: 23.11.2002 ರಂದು ಈ ಪ್ರಾಧಿಕಾರದಲ್ಲಿ ಅರ್ಜಿಸಲ್ಲಿಸಿ ಪ್ರಕರಣದಲ್ಲಿ ಅಮಾನತ್ತುಪಡಿಸಿದ ನೋಂದಾವಣೆ ಸಂಖ್ಯೆ ಸಿ.ಎನ್.ಎಸ್. 5175/5176 ಟ್ರ್ಯಾಕ್ಟರ್ ಮತ್ತು ಟ್ರೈಲರ್ ವಾಹನವನ್ನು ಮಧ್ಯಂತರ ಸ್ವಾಧೀನಕ್ಕೆ ಬಿಡುಗಡೆ ಮಾಡಬೇಕೆಂದು ಕೋರಿರುತ್ತಾರೆ ಅವರ ಅರ್ಜಿಯನ್ನು ನ್ಯಾಯಾಲಯವು ಪರಿಗಣಿಸಿ ವಿಚಾರಣೆಯನ್ನು ಬಾಕಿಯಿರಿಸಿಕೊಂಡು ವಾಹನವನ್ನು ದಿನಾಂಕ: 6.5.2003 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ನೀಡಿದ ವಾಹನದ ಬೆಲೆ ರೂ.48,200-00 ಹಾಗೂ ಅದೇ ಮೌಲ್ಯಕ್ಕೆ ಒಬ್ಬ ಜಾಮೀನುದಾರರನ್ನು ದಾಖಲಾತಿಗಳ ಸಮೇತ ಪಡೆದು ತಾತ್ಕಾಲಿಕವಾಗಿ ಬಿಡುಗಡೆ ಮಾಡಿರುತ್ತದೆ ಮುಂದುವರೆದು ನ್ಯಾಯಾಲಯದಲ್ಲಿ ಪ್ರಕರಣದ ಅಂತಿಮ ತೀರ್ಮಾನದ ಬಗ್ಗೆ ದಿನಾಂಕ: 28.4.2004 ರಿಂದ 20.10.2004 ರ ವರೆಗೆ ಪ್ರಕರಣದ ದಾಖಲಾತಿಗಳು ಅರ್ಜಿದಾರರ ಅರ್ಜಿಗಳು ಅವರು ನ್ಯಾಯಾಲಯದಲ್ಲಿ ನೀಡಿದ ಹೇಳಿಕೆ ನ್ಯಾಯಾಲಯಕ್ಕೆ ಹಾಜರುಪಡಿಸಿದ ಸಾಕ್ಷ್ಯಾಧಾರಗಳನ್ನು ಪರಿಶೀಲಿಸಲಾಯಿತು ಅರ್ಜಿದಾರರು ಅವರ ಹೇಳಿಕೆಯಲ್ಲಿ ಸಿ.ಎನ್.ಎಸ್. 5175-5176 ಟ್ರ್ಯಾಕ್ಟರ್ ನನಗೆ ಸೇರಿದ್ದಾಗಿರುತ್ತದೆ ಸದರಿ ಟ್ರ್ಯಾಕ್ಟರ್‌ನ್ನು ನನ್ನ ವ್ಯವಸಾಯ ಉದ್ದೇಶಕ್ಕಾಗಿ ಕೊಂಡುಕೊಂಡಿರುತ್ತೇನೆ. ನನಗೆ ಬಾಬಳ್ಳಿಯಲ್ಲಿ ಜಮೀನು ಇದೆ ನನಗೆ 20 ಎಕರೆ ಜಮೀನು ಇದೆ

ನನ್ನ ಜಮೀನಿನಲ್ಲಿ ಸಾಗುವಾನಿ ಮರಗಳನ್ನು ನೆಟ್ಟಿದ್ದು 20 ವರ್ಷಗಳಿಂದ ಬೆಳೆದ ಮರಗಳು ನನ್ನ ಜಮೀನಿನಲ್ಲಿ ಇದೆ ನನ್ನ ಜಮೀನಿನಲ್ಲಿ 20-25 ಸಾಗುವಾನಿ ಮರಗಳು ಇವೆ ಅಂದಾಜು 6 ಅಡಿ ಸುತ್ತಳತೆ ಮರಗಳು ಆಗಿರುತ್ತದೆ ನನಗೆ ನನ್ನ ಜಮೀನಿನಿಂದ 3-4 ಲಕ್ಷ ರೂ.ಗಳ ಆದಾಯ ಇರುತ್ತದೆ ನನಗೆ ವಾಸಿಸಲು 2 ಮನೆಗಳಿವೆ ನನ್ನ ಉಪಯೋಗಕ್ಕೆ ಸದ್ಯಕ್ಕೆ ಸಾಗುವಾನಿ ಮರಗಳಾಗಲೀ ಬೀಟೆ ಮರಗಳಾಗಲೀ ಬೇಕಾಗಿರುವುದಿಲ್ಲ ನನ್ನ ಟ್ರ್ಯಾಕ್ಟರ್ ನನ್ನ ಜಮೀನಿನ ಉಳುಮೆ ಸಾಗಾಣಿಕೆಗೆ ಉಪಯೋಗಿಸುತ್ತೇನೆ. ನನ್ನ ಟ್ರ್ಯಾಕ್ಟರ್‌ನ್ನು ಬಾಡಿಗೆ ಕೊಡುವುದಿಲ್ಲ ನಾನು ಬಾಬಳ್ಳಿಯಲ್ಲಿ ಕಾಗೆಕೊಡಮಗ್ಗೆಯ ಗ್ರಾಮ ಪಂಚಾಯಿತಿ ಸದಸ್ಯನಾಗಿರುತ್ತೇನೆ. ಬಾಬಳ್ಳಿಯಲ್ಲಿ ಹಿಂದೂ ಮುಸಲ್ಮಾನರು ವಾಸಿಸುತ್ತಾರೆ ಹಾಗೂ ಸುತ್ತಮುತ್ತಾ ಹಳ್ಳಿಗಳಲ್ಲು ಇರುತ್ತಾರೆ ನಾನು ಹಬ್ಬ ಹರಿದಿನಗಳಲ್ಲಿ ಎರಡು ಕಡೆಯವರು ಸೇರಿ ಹಬ್ಬವನ್ನು ಆಚರಿಸುತ್ತೇವೆ ಟ್ರ್ಯಾಕ್ಟರ್‌ನ್ನು ಕೊಡುವ ಸಂದರ್ಭ ಉಂಟು ಮುಕ್ತಿಯರ್ ನಮ್ಮ ಗ್ರಾಮ ಪಂಚಾಯಿತಿ ಅಧ್ಯಕ್ಷರಾಗಿದ್ದು ನನ್ನ ಟ್ರ್ಯಾಕ್ಟರ್‌ನ್ನು ಉರಸ್ ಹಬ್ಬ ಆಚರಿಸಲು ಕೇಳಿಕೊಂಡಿದ್ದರು ಅಂದಿನ ಶಾಸಕರಾದ ಶ್ರೀ ಕರಿಯಣ್ಣರವರು ಒಣಸೌದೆಯನ್ನು ಸಾಗಿಸಲು ವಲಯ ಅರಣ್ಯಾಧಿಕಾರಿ ಭದ್ರಾವತಿರವರಿಗೆ ಪತ್ರವನ್ನು ನೀಡಿದ್ದು ಸದರಿ ಪತ್ರವನ್ನು ನನಗೆ ತೋರಿಸಿ ಟ್ರ್ಯಾಕ್ಟರ್‌ನ್ನು ತೆಗೆದುಕೊಂಡು ಹೋಗಿರುತ್ತಾರೆ. ಶಾಸಕರು ನೀಡಿದ ಪತ್ರದ ಜೆರಾಕ್ಸ್ ಪತ್ರವನ್ನು ಹಾಜರುಪಡಿಸಿದ್ದು ಅದನ್ನು ನಿಶಾನೆ ಡಿ1 ಎಂದು ಆಗಿರುತ್ತದೆ ನಾನು ಡ್ರೈವರ್‌ಗೆ ನನ್ನ ಟ್ರ್ಯಾಕ್ಟರ್‌ನಲ್ಲಿ ಕಾಡಿನಲ್ಲಿ ಒಣ ಸೌದೆಯನ್ನು ಮಾತ್ರ ಹಾಕಬೇಕು ಬೇರೆ ಯಾವುದೇ ವಸ್ತುಗಳನ್ನು ಹಾಕಬಾರದು ಎಂದು ಹೇಳಿದ್ದೆ ನನ್ನ ಟ್ರ್ಯಾಕ್ಟರನ್ನು ಅರಣ್ಯ ಇಲಾಖೆಯವರು ವಶಪಡಿಸಿಕೊಂಡಿರುತ್ತಾರೆ ಎಂದು ನನಗೆ ತಿಳಿಯಿತು ಅಲ್ಲಿ ನೋಡಲಾಗಿ ಒಣ ಸೌದೆಯ ಒಳಗಡೆ ತುಂಡುಗಳು ಇದ್ದದ್ದು ಕಂಡು ಬಂದಿತು ಟ್ರ್ಯಾಕ್ಟರ್‌ನ್ನು ಖರೀದಿಸುವ ಸಂದರ್ಭದಲ್ಲಿ ಸಾಲವನ್ನು ಮಾಡಿರುತ್ತೇನೆ ಟ್ರ್ಯಾಕ್ಟರ್ ಇಲ್ಲದಿದ್ದರೆ ನನ್ನ ಜೀವನ ನಿರ್ವಹಣೆಗೆ ತೊಂದರೆಯಾಗುತ್ತದೆ ಆದ್ದರಿಂದ ನನ್ನ ಟ್ರ್ಯಾಕ್ಟರ್‌ನ್ನು ಬಿಟ್ಟುಕೊಡಬೇಕೆಂದು ನ್ಯಾಯಾಲಯವನ್ನು ಬೇಡಿಕೊಳ್ಳುತ್ತೇನೆ.

ಅಭಿಯೋಜನಾ ವತಿಯಿಂದ ಸಹಾಯಕ ಸರ್ಕಾರಿ ಅಭಿಯೋಜಕರು ಮಾಡಿದ ಪಾಟೀ ಸವಾಲಿನಲ್ಲಿ ಅರ್ಜಿದಾರರು ಹೇಳಿಕೆ ನೀಡಿ ಟ್ರ್ಯಾಕ್ಟರ್‌ನ್ನು ಮುಕ್ತಿಯಾರ್‌ರವರಿಗೆ ಅವರ ಧಾರ್ಮಿಕ ಹಬ್ಬದ ಪ್ರಯುಕ್ತ ಉಪಯೋಗಿಸಲು ಕೊಟ್ಟ ಸಂದರ್ಭದಲ್ಲಿ ಚಾಲಕ ಅಮ್ಜದ್ ಆಗಿರುತ್ತಾನೆ ನಾನು ವಾಹನವನ್ನು ದುರುಪಯೋಗಪಡಿಸಿಕೊಳ್ಳಬಾರದು ಎಂಬ ಬಗ್ಗೆ ನಿರ್ದೇಶನವನ್ನು ಬರವಣಿಗೆಯಲ್ಲಿ ಕೊಟ್ಟಿರುವುದಿಲ್ಲ ಆದರೆ ಮಾನವೀಯತೆ ದೃಷ್ಟಿಯಿಂದ ನನ್ನ ವಾಹನವನ್ನು ಅವರಿಗೆ ಕಳುಹಿಸಿಕೊಟ್ಟಿದ್ದೆ ಎಂದು ಹೇಳಿಕೆ ನೀಡಿರುತ್ತಾರೆ.

ಮೇಲ್ಕಂಡ ಅರ್ಜಿದಾರರ ಅರ್ಜಿ ಹಾಗೂ ನ್ಯಾಯಾಲಯದಲ್ಲಿ ನೀಡಿದ ಹೇಳಿಕೆಗಳು ಮತ್ತು ಅರ್ಜಿದಾರರು ನ್ಯಾಯಾಲಯಕ್ಕೆ ನೀಡಿದ ದಾಖಲಾತಿಗಳನ್ನು ಪರಿಶೀಲಿಸಿದಾಗ ಈ ಕೆಳಕಾಣಿಸಿದ ಅಂಶಗಳು ಕಂಡು ಬಂದಿರುತ್ತದೆ.

1. ವಾಹನದ ಮಾಲೀಕರಾದ ಶ್ರೀ ಶೇಷಗಿರಿ ಬಿನ್ ನಾಗೇಂದ್ರಗಿರಿ ಇವರು ನಾನು ನಿರಪರಾಧಿ ಎಂದು ತಿಳಿದಿದ್ದು ಈ ಬಗ್ಗೆ ಯಾವುದೇ ಅಧಿಕೃತ ಸಾಕ್ಷ್ಯಾಧಾರಗಳನ್ನು ಹಾಜರುಪಡಿಸಿರುವುದಿಲ್ಲ.
2. ರಂಜಾನ್ ಹಬ್ಬ ಆಚರಿಸುವ ಬಗ್ಗೆ 1 ಟ್ರ್ಯಾಕ್ಟರ್ ಉರುವಲು ಸೌದೆಯನ್ನು ನಿಯಮಾನುಸಾರ ನೀಡುವ ಬಗ್ಗೆ ವಲಯ ಅರಣ್ಯಾಧಿಕಾರಿ ಭದ್ರಾವತಿರವರಿಗೆ ಪತ್ರ ಬರೆದಿರುತ್ತಾರೆ ವಿನಃ ವಾಹನದ ಮಾಲೀಕರಿಗೆ ಟ್ರ್ಯಾಕ್ಟರ್ ನೀಡುವ ಬಗ್ಗೆ ಯಾವುದೇ ಸೂಚನೆ ನೀಡಿರುವುದಿಲ್ಲ.
3. ರಂಜಾನ್ ಹಬ್ಬ ಡಿಸೆಂಬರ್ 6, 2002 ರಂದು ಇದ್ದು ಶಾಸಕರು 28.10.2002 ರಂದು ಉರುವಲು ಸೌದೆಗೆ ಪತ್ರ ನೀಡಿದ್ದು ವಾಹನವನ್ನು ದಿನಾಂಕ: 7.11.2002 ರಂದು ಅರಣ್ಯ ಸಿಬ್ಬಂದಿಯವರು ಅಮಾನತ್ತುಪಡಿಸಿದ್ದು ಈ ರೀತಿ ಒಂದಕ್ಕೊಂದು ಸಂಬಂಧ ಇರುವುದಿಲ್ಲ ಸದರಿ ವಿಚಾರಗಳು ಒಂದು ಕಟ್ಟುಕತೆಯಾಗಿರುತ್ತದೆ.
4. ವಾಹನವನ್ನು ಅಮ್ಜದ್ ಚಾಲಕನ ಸಂಗಡ ಕಳುಹಿಸಿರುವುದಾಗಿ ತಿಳಿಸಿದ್ದು ಆದರೆ ಇಲಾಖೆಯವರು ವಾಹನವನ್ನು ಅಮಾನತ್ತುಪಡಿಸಿಕೊಂಡ ಸಂದರ್ಭದಲ್ಲಿ ವಾಹನದ ಚಾಲಕ ಈಶ್ವರಗಿರಿ ಬಿನ್ ನಾಗೇಂದ್ರಗಿರಿ ಆಗಿರುತ್ತಾರೆ. ಸದರಿ ವ್ಯಕ್ತಿಯು ವಾಹನದ ಮಾಲೀಕರ ಸಹೋದರನಾಗಿರುತ್ತಾರೆ ಅವರನ್ನು ಸಹ ನ್ಯಾಯಾಂಗ ಬಂಧನಕ್ಕೆ ನೀಡಿರುತ್ತದೆ ಈ ಬಗ್ಗೆ ವಾಹನದ ಮಾಲೀಕರು ಯಾವುದೇ ವಿಚಾರವನ್ನು ನ್ಯಾಯಾಲಯದಲ್ಲಿ ತಿಳಿಸಿರುವುದಿಲ್ಲ
5. ವಾಹನ ತೆಗೆದುಕೊಂಡು ಹೋಗಿ ಅರಣ್ಯ ಅಪರಾಧ ಪ್ರಕರಣದಲ್ಲಿ ತೊಡಗಿಸಿದ ವ್ಯಕ್ತಿಗಳ ಮೇಲೆ ಅರ್ಜಿದಾರರು ಯಾವುದೇ ಪೋಲೀಸ್ ಠಾಣೆಯಲ್ಲಿ ಕಂಪ್ಲೇಂಟ್ ನೀಡಿರುವುದಿಲ್ಲ.
6. ವಾಹನದ ಮಾಲೀಕರು ಅವರ ಹೇಳಿಕೆಯಲ್ಲಿ ನಾನು 20 ಎಕರೆ ಜಮೀನು ಹೊಂದಿದ್ದು ನನ್ನ ಜಮೀನಿನ ಸುತ್ತಮುತ್ತ ಸಾಗುವಾನಿ ಬೀಟೆ ಮರಗಳು ಇದೆ ನನಗೆ ಯಾವುದೇ ಮರದ ಅವಶ್ಯಕತೆಯಿಲ್ಲ ಎಂದು ಹೇಳಿಕೆ ನೀಡಿದ್ದು ಈ ಬಗ್ಗೆ ಯಾವುದೇ ಅಧಿಕೃತ ದಾಖಲಾತಿಗಳನ್ನು ನೀಡಿರುವುದಿಲ್ಲ.
7. ಭದ್ರಾವತಿ ವಲಯ ಅರಣ್ಯಾಧಿಕಾರಿ ಸಿಬ್ಬಂದಿಯವರು ವಾಹನವನ್ನು ದಿನಾಂಕ: 7.11.2002 ರಂದು ಅಮಾನತ್ತುಪಡಿಸಿದ್ದು ಅರ್ಜಿದಾರರು ದಿನಾಂಕ: 23.11.2002 ರಂದು ಈ ನ್ಯಾಯಾಲಯಕ್ಕೆ ಅರ್ಜಿಸಲ್ಲಿಸಿ ವಾಹನವನ್ನು ಬಿಡುಗಡೆ ಕೋರಿದ್ದು ಅಂದರೆ 15 ದಿವಸಗಳ ನಂತರ ಅರ್ಜಿ ಸಲ್ಲಿಸಿರುವುದು ಕಂಡು ಬಂದಿರುತ್ತದೆ ಇದರಿಂದ ವಾಹನದ ಮಾಲೀಕರಿಗೆ ವಾಹನದ ಉಸ್ತುವಾರಿಯ ಬಗ್ಗೆ ಇರುವ ಆಸಕ್ತಿ ಕಂಡು ಬರುತ್ತದೆ.
8. ವಾಹನದ ಚಾಲಕ ಅಥವಾ ಶಾಸಕರಾದ ಶ್ರೀ ಕರಿಯಣ್ಣ ರವರನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿ ತಾನು ತಪ್ಪಿತಸ್ಥನಲ್ಲ ಹಾಗೂ ಈ ಪ್ರಕರಣಕ್ಕೂ ನನಗೂ ಸಂಬಂಧ ಇರುವುದಿಲ್ಲ ಎಂದು ಮಾಲೀಕರು ದೃಢಪಡಿಸಬಹುದಾಗಿದ್ದು ವಾಹನದ ಮಾಲೀಕರು ಸಾಕ್ಷ್ಯಾಧಾರಗಳನ್ನು ಹಾಜರುಪಡಿಸಿರುವುದಿಲ್ಲ.
9. ಈ ಪ್ರಕರಣದಲ್ಲಿ ವಲಯ ಅರಣ್ಯಾಧಿಕಾರಿಗಳ ಸಿಬ್ಬಂದಿಯಾಗಲೀ ವಲಯ ಅರಣ್ಯಾಧಿಕಾರಿಗಳಾಗಲೀ ಶಾಸಕರ ಅನುಮತಿ ಮೇರೆಗೆ ಟ್ರ್ಯಾಕ್ಟರ್‌ನ್ನು ಸೌದೆ ತರಲು ಕಾಡಿಗೆ ಕಳುಹಿಸಿದ್ದು ಅಲ್ಲಿ ಸೌದೆಯ ಬದಲು ಬೀಟೆ ಹಾಗೂ ಸಾಗುವಾನಿ ತುಂಡುಗಳು ತುಂಬಿರುತ್ತಾರೆ ಎಂದು ಎಲ್ಲಿಯೂ ಸಹ ತಿಳಿಸಿರುವುದಿಲ್ಲ ಆ ಬಗ್ಗೆ ವಾಹನದ ಮಾಲೀಕರ ವಕೀಲರು, ಅಭಿಯೋಜನಾ ಸಾಕ್ಷಿಗಳನ್ನು ವಿಚಾರಣೆ ಮಾಡಿ ದೃಢಪಡಿಸಿರುವುದಿಲ್ಲ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಮತ್ತು ಅರ್ಜಿದಾರರ ಪರ ವಕೀಲರ ವಾದವನ್ನು ಆಲಿಸಿದಾಗ ಅರ್ಜಿದಾರರು ವಾಹನದ ಮಾಲೀಕರು ಅಥವಾ ಅವರ ಪ್ರತಿನಿಧಿಗೆ ಅಥವಾ ಅವರ ಚಾರ್ಜ್ ಪಡೆದವರಿಗೆ (ಚಾಲಕರಿಗೆ) ತಿಳುವಳಿಕೆ ಮತ್ತು ಶಾಮೀಲಾಗಿರದೇ ಅಪರಾಧವಾಗಿದೆ ಎಂಬುದನ್ನು ಡಿಫೆನ್ಸ್‌ರವರು ರುಜುವಾತುಪಡಿಸಿರುವುದಿಲ್ಲ ವಾಹನದ ಮಾಲೀಕರು ಅಗತ್ಯವಾದ ಮತ್ತು ಸಾಧ್ಯವಾಗಬಹುದಾದ ಎಲ್ಲಾ ರೀತಿಯ ಮುಂಜಾಗ್ರತೆ ಕ್ರಮ ತೆಗೆದುಕೊಂಡಿದ್ದರೆ ಈ ಕೃತ್ಯ ನಡೆಯುತ್ತಿರಲಿಲ್ಲ ಅರ್ಜಿದಾರರು ವಾಹನ ಬಿಡುಗಡೆ ಕೋರಿ ಸಲ್ಲಿಸಿದ ಅರ್ಜಿಯಲ್ಲಿರುವ ವಿಷಯ ಮತ್ತು ನ್ಯಾಯಾಲಯದಲ್ಲಿ ನೀಡಿದ ಹೇಳಿಕೆಗಳು ಒಂದು ಕಟ್ಟುಕತೆ ನಂಬಲು ಅಸಾಧ್ಯವಾಗಿರುತ್ತದೆ.

ಅರ್ಜಿದಾರರ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಸಾಗಾಣಿಕೆಗೆ ಬಳಕೆಯಾಗದಂತೆ ವಾಹನದ ಮಾಲೀಕರು ಅಥವಾ ಅವರ ಪ್ರತಿನಿಧಿಗಳು ಯಾವುದೇ ಮುನ್ನೆಚ್ಚರಿಕೆ ವಹಿಸಿದ ಬಗ್ಗೆ ಸಮರ್ಪಕವಾದ ಸಾಕ್ಷಿಗಳನ್ನು ನೀಡಿರುವುದಿಲ್ಲ ವಾಹನದಲ್ಲಿ ನನ್ನ ಗಮನಕ್ಕೆ ಬಾರದಂತೆ ಈ ಕೃತ್ಯ ನಡೆದಿದೆ ಎಂಬುದನ್ನು ಕರ್ನಾಟಕ ಅರಣ್ಯ ಕಾಯಿದೆ ಕಲಂ 71 (ಬಿ) (2) ರೀತ್ಯ ಸಾಬೀತುಪಡಿಸುವ ಜವಾಬ್ದಾರಿ ವಾಹನದ ಮಾಲೀಕರಿಗೆ ಸೇರಿದ್ದಾಗಿರುತ್ತದೆ. ಅಲ್ಲದೇ ವಾಹನದ ಮಾಲೀಕರ ಏಜೆಂಟರಾಗಲೀ ಚಾಲಕರಾಗಲೀ ಅಥವಾ ನಂಬಿಕೆ ಪ್ರತಿನಿಧಿಗಳು ವಾಹನದಲ್ಲಿ ಅಕ್ರಮ ಸಾಗಾಣಿಕೆಯಾಗದಂತೆ ಮುನ್ನೆಚ್ಚರಿಕೆ ವಹಿಸುವುದು ಸಹ ಇವರುಗಳ ಜವಾಬ್ದಾರಿಯಾಗಿರುತ್ತದೆ.

"Without prejudice to the provisions of sub-section (1), no order confiscating any tool, rope, chain, boat, vehicle or cattle shall be made under section 71A if the owner of the tool, rope, chain, boat, vehicle or cattle proves to the satisfaction of the authorised officer that it was used in carrying the timber, sandalwood, charcoal, firewood or ivory without the knowledge or connivance of the owner himself, his agent , if any, and the person in charge of the tool, rope, chain, boat, vehicle or cattle and that each of them had taken all reasonable and necessary precautions against such use."

ಟ್ರ್ಯಾಕ್ಟರ್ ಮತ್ತು ಟ್ರೈಲರ್ ಸಿ.ಎನ್.ಎಸ್. 5175 ಮತ್ತು 5176ರ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಾನೂನು ಬಾಹಿರವಾಗಿ ಸಾಗಿಸದಂತೆ ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿದ್ದೇವೆ ಎಂಬುದನ್ನು ಸಾಕ್ಷಿ ಪುರಾವೆಗಳ ಸಹಿತ ಈ ಪ್ರಕರಣದಲ್ಲಿ ಸಾಬೀತುಪಡಿಸಲು ವಾಹನದ ಮಾಲೀಕರು ಹಾಗೂ ಅವರ ಪರ ವಕೀಲರು ಸಂಪೂರ್ಣ ವಿಫಲಗೊಂಡಿರುತ್ತರಾದ್ದರಿಂದ ಪ್ರಕರಣದ ವಾಹನವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ. ಹಾಲಿ ಪ್ರಕರಣಕ್ಕೆ ಕೇರಳ ರಾಜ್ಯ ತೀರ್ಮಾನ ಕ್ರೈಮ್ಸ್ 2000 (3) ಪುಟ 563 ಅತ್ಯಂತ ಸರಿ ಹೊಂದುವಂತಹ ತೀರ್ಮಾನವಾಗಿರುತ್ತದೆ ಅದರ ಉದ್ಧೃತ ಭಾಗ ಈ ಕೆಳಕಂಡಂತಿದೆ.

"The contention that such a strict view would adversely affect an innocent vehicle owner cannot be countenanced since any narrow or liberal interpretation of confiscatory provisions in the Act can eventually lead to disastrous consequences for forest wealth which is a very endangered bounty of nature. The idea behind extension of confiscatory provisions to vehicles etc., is to convey a pre-emptory and explicit message to the vehicle owners not to allow their vehicles to be used for depletion of forest wealth. If any vehicle is caught in the nefarious act of carrying illicit forest produce, it is not enough that the owner establishes his innocence along. If he wants to retrieve his vehicle he must show further that the person who was in-charge of the vehicle has taken reasonable and necessary precautionary measures against such user of the vehicle. The owner cannot rest with establishing his innocence in the matter. it may be that having succeeded in showing his innocence his failure to establish the next limb might lead to hard consequences to him. Legislature intended, by providing such stringent conditions, to prevent harder consequences for the society and for the posterity."

ಮೇಲ್ಕಂಡ ವಿದ್ಯಾಮಾನಗಳನ್ನು ಅವಲೋಕಿಸಿ ನೋಡಿದಾಗ ಅರ್ಜಿದಾರರ ತಿಳುವಳಿಕೆಗೆ ಬಂದು ಈ ಕೃತ್ಯ ನಡೆದಿದೆ ಹಾಗೂ ಅರ್ಜಿದಾರರು ಅಥವಾ ಅವರು ನೇಮಿಸಿದಂತಹ ವ್ಯಕ್ತಿಗಳು ಸಹ ಮೇಲ್ಕಂಡ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆಯಲ್ಲಿ ಭಾಗವಹಿಸಿರುತ್ತಾರೆ ಎಂಬುದಕ್ಕೆ ಯಾವುದೇ ಸಂಶಯವಿರುವುದಿಲ್ಲ ಹಾಗೂ ಈ ವಾಹನವನ್ನು ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸಿದಂತೆ ವಾಹನದ ಮಾಲೀಕರು, ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿರುವುದಿಲ್ಲ ಟ್ರ್ಯಾಕ್ಟರ್‌ನಲ್ಲಿ ಸಾಗುವಾನಿ ಬೀಟೆ ತುಂಡುಗಳ ಅಕ್ರಮ ಸಾಗಾಣಿಕೆಯು ವಾಹನದ ಮಾಲೀಕರಿಗೆ ಗೊತ್ತಿದ್ದೆ ಈ ಕೃತ್ಯ ನಡೆದಿದೆಯೆಂದು ಅಭಿಪ್ರಾಯಪಡುತ್ತೇನೆ.

ಈ ಮೇಲಿನ ಎಲ್ಲಾ ಕಾರಣಗಳಿಂದ 3 ನೇ ಅಂಶದ ಮೊದಲಿನ ಭಾಗದ ಪ್ರಶ್ನೆಗೆ ನನ್ನ ಉತ್ತರ ಹೌದು ಎಂದು ಎರಡನೇ ಭಾಗದ ಪ್ರಶ್ನೆಗೆ ನನ್ನ ಉತ್ತರ ಇಲ್ಲವೆಂದು ಅಭಿಪ್ರಾಯಪಡುತ್ತೇನೆ.

**ಅಂಶ:-4**

ದಿನಾಂಕ: 7.11.2003 ರಂದು ಟ್ರ್ಯಾಕ್ಟರ್ ಮತ್ತು ಟ್ರೈಲರ್ ಸಂಖ್ಯೆ: ಸಿ.ಎನ್.ಎಸ್. 5175 ಮತ್ತು 5176 ಅಕ್ರಮವಾಗಿ ಬೀಟೆ ಮತ್ತು ಸಾಗುವಾನಿ ತುಂಡುಗಳು 5=1.270 ಎಂ 3ನ್ನು ಸಾಗಾಣಿಕೆ ಮಾಡುತ್ತಿರುವುದನ್ನು ಭದ್ರಾವತಿ ವಲಯದ ಅರಳಿಹಳ್ಳಿ ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರು ಸರ್ಕಾರದ ಪರ ಅಮಾನತ್ತುಪಡಿಸಿರುವುದು ಈ ನ್ಯಾಯಾಲಯಕ್ಕೆ ಹಾಜರುಪಡಿಸಿ ದಾಖಲಾತಿಗಳಿಂದ ದೃಢಪಟ್ಟಿರುತ್ತದೆ.

ಕರ್ನಾಟಕ ಅರಣ್ಯ ಕಾಯಿದೆ ಕಲಂ 80ರ ಪ್ರಕಾರ ಯಾವುದೇ ಅರಣ್ಯ ಪ್ರಕರಣದಲ್ಲಿ ವಶಪಡಿಸಿಕೊಂಡ ಅರಣ್ಯ ಉತ್ಪನ್ನವು ಪ್ರಾಥಮಿಕ ಹಂತದಲ್ಲಿ ಸರ್ಕಾರದೆಂದೇ ಭಾವಿಸಬೇಕಾಗಿದ್ದು ಆಪಾದನೆ ಹೊರಿಸಲ್ಪಟ್ಟ ವ್ಯಕ್ತಿ ಅಮಾನತ್ತುಪಡಿಸಿಕೊಂಡ ಮರವು ತನಗೆ ಸೇರಿದೆ ಎಂಬುದನ್ನು ಪುರಾವೆ ಮಾಡುವ ಹೊಣೆಯನ್ನು ಹೊರಬೇಕಾಗಿರುತ್ತದೆ.

"When in any proceedings taken under this Act or in consequence of anything done under this Act or under any other law for the time being in force, a question arises as to whether any forest produce is the property of the State Government, such produce shall be presumed to be the property of the State Government until the contrary is proved, and in case of any prosecution the burden of proving the contrary shall lie on the accused."

104. A. Restrictions on trade and transport of black wood or Bite trees and timber thereof-No person other than-

(a) the State Government; or
(b) the officers of the State Government not below the rank of a Divisional Forest Officer, authorised in writing in this behalf, shall purchase or transport any blackwood or bite tree (Dalbergia Latifolia) or timber thereof;

(2) No Person shall sell or otherwise dispose of any such tree or timber to any person other than the State Government or the aforesaid officers.

(8) Any person contravening the provisions of this section or any rule made thereunder shall, on conviction, be punishable with imprisonment for a term which may extend to (five years) and with fine which may extend to (ten thousand rupees)

ಈ ಪ್ರಕರಣದಲ್ಲಿ ಆಪಾದನೆ ಹೊರಿಸಲ್ಪಟ್ಟ ವ್ಯಕ್ತಿಗಳು ಪ್ರಕರಣದಲ್ಲಿ ವಶಪಡಿಸಿಕೊಂಡ ವಸ್ತುಗಳು ನಮಗೆ ಸೇರಿದೆ ಎಂಬ ಬಗ್ಗೆ ಯಾವುದೇ ದಾಖಲಾತಿಗಳನ್ನು ಸಹ ಹಾಜರುಪಡಿಸಿರುವುದಿಲ್ಲ ಆದ್ದರಿಂದ ಪ್ರಕರಣದಲ್ಲಿ ವಶಪಡಿಸಿಕೊಂಡ ಬೀಟೆ ಮತ್ತು ಸಾಗುವಾನಿ ತುಂಡುಗಳು ಅರಣ್ಯ ಕಾಯಿದೆ 80 ರಂತೆ ಸರ್ಕಾರಿ ಸ್ವತ್ತೆಂದು ರುಜುವಾತು ಆಗಿರುತ್ತದೆ.

**ಅಂಶ:-5**

ಅರ್ಜಿದಾರರಿಗೆ ಸೇರಿದ ಟ್ರ್ಯಾಕ್ಟರ್ ಮತ್ತು ಟ್ರೈಲರ್ ಸಂಖ್ಯೆ: ಸಿ.ಎನ್.ಎಸ್. 5175 ಮತ್ತು 5176ರಲ್ಲಿ ಸರ್ಕಾರದ ಸ್ವತ್ತಾದ ಬೀಟೆ 3=1.101 ಎಂ 3 ಸಾಗುವಾನಿ 2=0.169 ಎಂ. 3 ತುಂಡುಗಳು ಅಕ್ರಮವಾಗಿ ಸಾಗಿಸಲು ಬಳಸಲಾಗಿದ್ದು, ವಾಹನದ ಮಾಲೀಕರು ಪ್ರತ್ಯೇಕ್ಷವಾಗಿ ಭಾಗಿಯಾಗಿರುವುದು ಸಾಕ್ಷ್ಯಾಧಾರಗಳಿಂದ ರುಜುವಾತು ಆಗಿರುತ್ತದೆ. ಈ ಪ್ರಕರಣದ ಫಿರ್ಯಾದಿದಾರರು ಅರ್ಜಿದಾರರ ಸಹೋದರ ಮತ್ತು ಸಹಚರರನ್ನು ಮಾಲು ಸಮೇತ ಬಂಧಿಸಿದ್ದು ನ್ಯಾಯಾಂಗ ಬಂಧನಕ್ಕೆ ಸಹ ನೀಡಿರುತ್ತಾರೆ ಅವುಗಳ ಬಗ್ಗೆ ಸಮರ್ಪಕವಾದ ಸಾಕ್ಷ್ಯವನ್ನು ಅವರು ನೀಡಿರುತ್ತಾರೆ. ಸದರಿ ವಿಷಯವನ್ನು ಅರ್ಜಿದಾರರು ಅಲ್ಲಗಳೆದಿರುತ್ತಾರೆ ಸದರಿ ವೇಳೆ ಅವರ ಆರೋಪ ನಿಜವೆಂದು ಭಾವಿಸಬೇಕಾದಲ್ಲಿ ಅದಕ್ಕೆ ಸಮರ್ಪಕ ಸಾಕ್ಷ್ಯಾಧಾರಗಳನ್ನು ಒದಗಿಸುವ ಜವಾಬ್ದಾರಿ ಆರೋಪವನ್ನು ಎದುರಿಸುವ ಅರ್ಜಿದಾರನದ್ದಾಗಿದ್ದು ಹಾಲಿ ಈ ಪ್ರಕರಣದಲ್ಲಿ ಅರ್ಜಿದಾರರು ತಾನು ಮಾಡದೇ ಇರುವ ಆಪಾದನೆಯನ್ನು ಪುರಾವೆ ಮಾಡುವಲ್ಲಿ ಸಾಕ್ಷ್ಯಾಧಾರಗಳನ್ನು ಹಾಜರುಪಡಿಸದ ಕಾರಣ ಅರ್ಜಿದಾರರ ವಾಹನ ಅಕ್ರಮ ಮರಗಳ ಕಳ್ಳ ಸಾಗಾಣಿಕೆಯಲ್ಲಿ ಭಾಗಿಯಾಗಿರುವುದು ನಿಸ್ಸಂದೇಹವಾಗಿ ಪುರಾವೆಯಾಗಿರುತ್ತದೆ ಆದ್ದರಿಂದ ಪ್ರಕರಣದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಆದ್ದರಿಂದ ಅಂಶ 5ಕ್ಕೆ ಉತ್ತರ ಹೌದು ಎಂಬುದಾಗಿದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ವಾಹನದ ಮಾಲೀಕರು ಅರಣ್ಯ ಉತ್ಪನ್ನ ಕಳ್ಳಸಾಗಾಣಿಕೆಯಲ್ಲಿ ವಾಹನವನ್ನು ಉಪಯೋಗಿಸಿರುವುದು ಸ್ಪಷ್ಟವಾಗಿ ಕಂಡುಬಂದಿರುತ್ತದೆ ಅಲ್ಲದೇ ಪ್ರಾಧಿಕಾರಕ್ಕೆ ಹಾಜರುಪಡಿಸಿದ ಪ್ರಕರಣದ ಮಹಜರ್ ನಿಶಾನೆ ಪಿ1ರ ಪ್ರಕಾರ ಹಾಗೂ ಪ್ರಾಸಿಕ್ಯೂಷನ್ ಸಾಕ್ಷಿಗಳಾದ ಪಿಡಬ್ಲ್ಯೂ-1 ಮತ್ತು ಪಿಡಬ್ಲ್ಯೂ-2 ರವರು ಪ್ರಾಧಿಕಾರದಲ್ಲಿ ಸಾಕ್ಷಿ ನುಡಿದಂತೆ ಬೀಟೆ ತುಂಡುಗಳು 3=1.101 ಎಂ3 ಸಾಗುವಾನಿ ತುಂಡುಗಳು 2=0.169 ಎಂ3 ಸಾಗಿಸಲು ಟ್ರ್ಯಾಕ್ಟರ್ ಮತ್ತು ಟ್ರೈಲರ್ ಸಿ ಎನ್ ಎಸ್ 5175- ಮತ್ತು 5176 ಬಳಸಿರುವುದು ಸ್ಪಷ್ಟವಾಗಿ ಕಂಡು ಬಂದಿರುತ್ತದೆ ಅಲ್ಲದೇ ನನ್ನ ಮುಂದೆ ಹಾಜರುಪಡಿಸಿದ ದಾಖಲಾತಿಗಳು ಸಾಕ್ಷ್ಯಾಧಾರಗಳು ಮತ್ತು ವಾದ ವಿವಾದಗಳಿಂದ ವಾಹನ ಮಾಲೀಕರಾಗಲೀ ಇಲ್ಲವೇ ವಾಹನ ಉಸ್ತುವಾರಿದಾರರಾಗಲೀ ವಾಹನವು ಅರಣ್ಯ ಉತ್ಪನ್ನ ಅಕ್ರಮ ಸಾಗಾಣಿಕೆಯಲ್ಲಿ ಭಾಗಿ ಆಗದಂತೆ ಮುಂಜಾಗ್ರತೆ ಕ್ರಮ ತೆಗೆದುಕೊಳ್ಳದೇ ಬದಲಾಗಿ ತಮಗೆ ಗೊತ್ತಿದೆ ಈ ಎಲ್ಲಾ ವ್ಯಕ್ತಿಗಳು ಈ ವಾಹನದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನವನ್ನು ಅರಣ್ಯ ಕಾಯಿದೆ ಮತ್ತು ಕಾನೂನಿನ ವಿರುದ್ದವಾಗಿ ಸಾಗಿಸಲು ಉಪಯೋಗಿಸಿದ್ದಾರೆಂದು ತೀರ್ಮಾನಿಸಿ ಈ ಕೆಳಕಂಡ ಆದೇಶ ನೀಡಬಯಸುತ್ತೇನೆ.

**ಆದೇಶ**

ಈ ಮೇಲ್ಕಾಣಿಸಿದ ಪ್ರಕರಣಕ್ಕೆ ಸಂಬಂಧಿಸಿದಂತೆ ಎಲ್ಲಾ ಅಗತ್ಯ ದಾಖಲಾತಿಗಳನ್ನು ಹಾಗೂ ಸಾಕ್ಷ್ಯಾಧಾರಗಳನ್ನು ಮತ್ತು ಎಲ್ಲಾ ಅರ್ಜಿಗಳನ್ನು ಗಣನೆಗೆ ತೆಗೆದುಕೊಂಡು ಶ್ರೀಮತಿ ಸೀಮಾಗರ್ಗ್ ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಭದ್ರಾವತಿ ವಿಭಾಗ ಭದ್ರಾವತಿ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71 (ಎ) (2ನೇ ತಿದ್ದುಪಡಿ) ಪ್ರಕಾರ ನೋಂದಾವಣೆ ಸಂಖ್ಯೆ: ಸಿಎನ್‌ಎಸ್ 5175-5176 ಟ್ರ್ಯಾಕ್ಟರ್ ಮತ್ತು ಟ್ರೈಲರ್ (ಚಾಸೀಸ್ ನಂ. IVXO65724 ಇಂಜಿನ್ ನಂ. IVXC 065318) ಮತ್ತು ಅದರಲ್ಲಿ ಅಕ್ರಮವಾಗಿ ಸಾಗಿಸುತ್ತಿದ್ದ ಬೀಟೆ ತುಂಡು 3=1.101 ಎಂ3 ಮತ್ತು ಸಾಗುವಾನಿ ತುಂಡು 2=0.169 ಎಂ3ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವುದಾದಲ್ಲಿ ಈ ಆದೇಶ ಹೊರಡಿಸಿದ 30 ದಿವಸಗಳೊಳಗೆ ಸಲ್ಲಿಸಬಹುದಾಗಿದೆ. ತಪ್ಪಿದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ ಅಲ್ಲದೇ ಮೇಲ್ಮನವಿ ಅವಧಿ ಮೀರಿದ ಬಳಿಕ ವಾಹನ ಹಾಗೂ ಅರಣ್ಯ ಉತ್ಪನ್ನವನ್ನು ಕಾನೂನು ರೀತ್ಯ ವಿಲೇವಾರಿ ಮಾಡಲು ಕೂಡ ಆದೇಶಿಸಿದೆ.

ಈ ಆದೇಶವನ್ನು ಈ ದಿನ ದಿನಾಂಕ: 15.12.2004 ರಂದು ನ್ಯಾಯಾಲಯದ ಮೊಹರು ಹಾಗೂ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಸೀಮಾಗರ್ಗ್**

ಪಿ.ಆರ್.124

ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ,
ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ ಭದ್ರಾವತಿ.

**ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ ಭದ್ರಾವತಿ ವಿಭಾಗ, ಭದ್ರಾವತಿ**

**ಸಂಖ್ಯೆ: ಎಫ್‌ಓಸಿ:ಸಿಓಎಸ್:ಸಿಆರ್: 3/88-89 ದಿನಾಂಕ: 15ನೇ ಆಗಸ್ಟ್ 2004**

**ನಿರೂಪಣಾಧಿಕಾರಿ :** ಶ್ರೀಮತಿ ಸೀಮಾಗರ್ಗ್ ಭಾಅಸೇ ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ.

**ಫಿರ್ಯಾದುದಾರರು :** ವಲಯ ಅರಣ್ಯಾಧಿಕಾರಿಗಳು, ಶಾಂತಿಸಾಗರ ವಲಯ,

**ವಿರುದ್ಧ**

**ಅರ್ಜಿದಾರರು :** ವಿಶ್ವನಾಥ್ ಪಿ. ಹಂಜೆ ಬಿನ್ ಪಕೀರಪ್ಪ ಹೆಚ್ ಹೊಸ ಬ್ರಹ್ಮಾವರ ಹರಿಹರ

**ಪ್ರಕರಣದ ಹಿನ್ನೆಲೆ:**

ಭದ್ರಾವತಿ ಅರಣ್ಯ ವಿಭಾಗದ ಶಾಂತಿಸಾಗರ ವಲಯದ ಸೂಳೆಕೆರೆ ಶಾಖೆಯ ಅರಣ್ಯ ಪಾಲಕರು ಮತ್ತು ಸಿಬ್ಬಂದಿ ವರ್ಗದವರು ದಿನಾಂಕ: 26.5.1988 ರಂದು ಮದುರನಾಯ್ಕನಹಳ್ಳಿ ಗ್ರಾಮದ ಸಮೀಪದ ಸೂಳೆಕೆರೆ ಮನ್ನಾಜಂಗ್ಲಿ ವ್ಯಾಪ್ತಿಯ ದೊಡ್ಡ ಮಟ್ಟಿಯ ಗಾಡಿ ದಾರಿಯಲ್ಲಿ ಕಾಯುತ್ತಿರುವಾಗ ಬೆಳಗಿನ ಜಾವ ಸುಮಾರು 5-30ರ ಸಮಯದಲ್ಲಿ ಕಾಡಿನ ಕಡೆಯಿಂದ ಒಂದು ವಾಹನವು ಬರುತ್ತಿರುವುದನ್ನು ಕಂಡು ನೋಡಿದಾಗ ಸದರಿ ವಾಹನ ಲಾರಿಯಾಗಿದ್ದು ಅದರಲ್ಲಿದ್ದ ಚಾಲಕ ಹಾಗೂ ಮತ್ತೊಬ್ಬ ಆಸಾಮಿಯನ್ನು ಹಿಡಿದು ವಿಚಾರಿಸಿದಾಗ ಲಾರಿಯಲ್ಲಿ ಕಾಡುಜಾತಿ ತುಂಡುಗಳಿರುತ್ತದೆ. ಸದರಿ ತುಂಡುಗಳು ಯಾವುದೇ ರಹದಾರಿ ಅಥವಾ ಪರವಾನಿಗೆ ಇರುವುದಿಲ್ಲ ಸದರಿ ತುಂಡುಗಳನ್ನು ಅಕ್ರಮ ಕಾಡಿನಲ್ಲಿ ಮರಗಳನ್ನು

ಕಡಿದು ತಯಾರಿಸಿ ಲಾರಿಯಲ್ಲಿ ತುಂಬಿಕೊಂಡು ಸಾಗಾಣಿಕೆ ಮಾಡುತ್ತಿರುವುದಾಗಿ ತಿಳಿಸಿದರು ಸದರಿ ತುಂಡುಗಳನ್ನು ಅಜಮಾಹಿಸಿ ನೋಡಲಾಗಿ ಕಾಡುಜಾತಿಯಾಗಿದ್ದು ಕೊಡಲಿಯಿಂದ ತುದಿ ಬುಡ ಕಡಿತಲೆ ಮಾಡಿದ್ದು ಅವುಗಳ ಮೇಲೆ ಯಾವುದೇ ರೀತಿಯ ಛಾಪಾ ವಗೈರೆ ಕಂಡು ಬರಲಿಲ್ಲ ಇವುಗಳನ್ನು ಲಾರಿಯಿಂದ ಕೆಳಗಿಳಿಸಿ ಎಣಿಕೆ ಮಾಡಲಾಗಿ 355 ತುಂಡುಗಳಿದ್ದು ಎಲ್ಲವೂ ತೊಗಟೆ ಸಹಿತವಾಗಿದ್ದು ಲಾರಿಯನ್ನು ಪರಿಶೀಲಿಸಿದಾಗ ಲಾರಿ ಅಶೋಕ ಲೈಲ್ಯಾಂಡ್ ರಿಜಿಸ್ಟ್ರೇಷನ್ ನಂ. ಸಿಎನ್‌ಎಸ್ 5005 ಆಗಿರುತ್ತದೆ ಈ ರೀತಿ ಸರ್ಕಾರದ ಮನ್ನಾ ಜಂಗ್ಲಿಯಿಂದ ಕಳ್ಳತನದಲ್ಲಿ ಮರದ ತುಂಡುಗಳನ್ನು ಸಾಗಿಸುತ್ತಿರುವುದು ಅಪರಾಧವಾದುದರಿಂದ ಸೆರೆಸಿಕ್ಕ ಲಾರಿಯ ಚಾಲಕ ಮತ್ತು ಮತ್ತೊಬ್ಬ ಆಸಾಮಿಗಳನ್ನು ದಸ್ತಗಿರಿ ಮಾಡಿ ಸದರಿ 355 ತುಂಡುಗಳನ್ನು ಹಾಗೂ ಲಾರಿಯನ್ನು ಸರ್ಕಾರದ ಪರವಾಗಿ ಅಮಾನತ್ತುಪಡಿಸಿ ಇಲಾಖಾ ಛಾಪಾವನ್ನು ಎಲ್ಲಾ ತುಂಡುಗಳಿಗೂ ಹಾಗೂ ಲಾರಿಗೂ ಹಾಕಿರುತ್ತಾರೆ ಎಲ್ಲಾ ತುಂಡುಗಳಿಗೂ ಮತ್ತು ಲಾರಿಯ ಮೇಲೆ ಕೆಂಪು ಬಣ್ಣದಿಂದ ಎಫ್‌ಓಸಿ ನಂ. 19/88-89 ಎಂದು ಬರೆದು ಸದರಿ 355 ತುಂಡುಗಳನ್ನು ಮೀಟರ್ ಮಾಪನದಿಂದ ಅಳತೆ ಮಾಡಿ ಕ್ರಮ ಸಂಖ್ಯೆ ಕೊಡಲಾಯಿತು ಸೆರೆ ಸಿಕ್ಕ ಆಸಾಮಿಗಳ ಹೆಸರನ್ನು ವಿಚಾರಿಸಲಾಗಿ ಮೊದಲನೇ ಆಸಾಮಿ ನಾಗರಾಜ್ ಬಿನ್ ಶ್ರೀನಿವಾಸ ಲಾರಿ ಚಾಲಕ, ಎರಡನೇ ಆಸಾಮಿ ವಿಶ್ವನಾಥನಾಯ್ಕ ಬಿನ್ ಸೇವಾನಾಯ್ಕ ಹೊನ್ನಾಳಿ ತಾ., ಎಂದು ತಿಳಿಸಿರುತ್ತಾರೆ. ಸದರಿ ಆಸಾಮಿಗಳನ್ನು ಚನ್ನಗಿರಿ ಕೋರ್ಟ್‌ನಲ್ಲಿ ಹಾಜರುಪಡಿಸಲು ತೀರ್ಮಾನಿಸಲಾಯಿತು ಲಾರಿ ಸಿಎನ್‌ಎಸ್ 5005 ಮತ್ತು 355 ಕಾಡುಜಾತಿ ತುಂಡುಗಳನ್ನು ಚನ್ನಗಿರಿ ವಲಯ ಕಛೇರಿ ಆವರಣಕ್ಕೆ ಸಾಗಿಸಿರುತ್ತಾರೆ ಈ ಪ್ರಕರಣದ ಬಗ್ಗೆ ಅರಣ್ಯ ಕಾಯಿದೆ 1963 ಸೆಕ್ಷನ್ 71 (ಎ) ಪ್ರಕಾರ ಕ್ರಮ ಜರುಗಿಸಲು ದಾಖಲಾತಿಗಳನ್ನು ನ್ಯಾಯಾಲಯದ ಸಮಕ್ಷಮ ಹಾಜರುಪಡಿಸಿರುತ್ತಾರೆ. ವಲಯ ಅರಣ್ಯಾಧಿಕಾರಿ ಚನ್ನಗಿರಿ ವಲಯ ಇವರು ಸಲ್ಲಿಸಿದ ಪ್ರಕರಣದ ದಾಖಲಾತಿಗಳನ್ನು ಪರಿಶೀಲಿಸಿ ಸದರಿ ಪ್ರಕರಣವನ್ನು ಅರಣ್ಯ ಕಾಯಿದೆ 71 (ಎ) ಪ್ರಕಾರ ಕ್ರಮ ತೆಗೆದುಕೊಂಡು ಪ್ರಕರಣದಲ್ಲಿ ವಶಪಡಿಸಿಕೊಂಡ ಲಾರಿ ಸಿಎನ್‌ಎಸ್ 5005 ಮತ್ತು 355 ಕಾಡು ಜಾತಿ ತುಂಡುಗಳನ್ನು ಈ ನ್ಯಾಯಾಲಯದಿಂದ ಮುಂದಿನ ಆದೇಶ ನೀಡುವವರೆಗೂ ವಲಯ ಅರಣ್ಯಾಧಿಕಾರಿ ಚನ್ನಗಿರಿ ವಲಯ ಇವರ ಸುರಕ್ಷತೆಗೆ ನೀಡಿರುತ್ತದೆ.

ದಿನಾಂಕ: 2.6.1988 ರಂದು ಲಾರಿ ಸಿಎನ್‌ಎಸ್ 5005 ಮಾಲೀಕರಾದ ಶ್ರೀ ವಿಶ್ವನಾಥ ಪಿ. ಹಂಜೆ ಬಿನ್ ಪಕೀರಪ್ಪ ಹೆಚ್ ಹೊಸ ಬ್ರಹ್ಮಾವರ ಹರಿಹರ ತಾ., ಇವರು ವಕೀಲರ ಮುಖಾಂತರ ಈ ನ್ಯಾಯಾಲಯಕ್ಕೆ ಅರ್ಜಿಸಲ್ಲಿಸಿ ವಾಹನ ಬಿಡುಗಡೆಗೆ ಕೋರಿರುತ್ತಾರೆ ವಾಹನ ಮಾಲೀಕರಿಗೆ ಅರಣ್ಯ ಕಾಯಿದೆ 71(ಬಿ) ಪ್ರಕಾರ ದಿನಾಂಕ: 4.6.1988 ರಂದು ಕಾರಣ ಕೇಳಿ ತಿಳುವಳಿಕೆ ಪತ್ರ ನೀಡಿರುತ್ತದೆ ವಾಹನದ ಮಾಲೀಕರು ದಿನಾಂಕ: 10.6.88 ರಂದು ಸಮಜಾಯಿಸಿ ನೀಡಿ ವಾಹನ ಬಿಡುಗಡೆಗೆ ಕೋರಿರುತ್ತಾರೆ. ದಿನಾಂಕ: 4.7.1998 ರಂದು ಸಹಾಯಕ ಸರ್ಕಾರಿ ಅಭಿಯೋಜಕರು ಜೆಎಂಎಫ್‌ಸಿ ನ್ಯಾಯಾಲಯ ಭದ್ರಾವತಿ ಇವರು ಆಕ್ಷೇಪಣೆಗೆ ಪತ್ರಸಲ್ಲಿಸಿ, ಅರ್ಜಿದಾರನು ಯಾವುದೇ ಪರ್ಮಿಟ್ ವಗೈರೆ ಇಲ್ಲದೇ ಅರಣ್ಯ ವಸ್ತುಗಳನ್ನು ಕಳ್ಳತನದಿಂದ ಸಾಗಿಸುತ್ತಿದ್ದರಿಂದ ವಾಹನದ ಬಿಡುಗಡೆ ಕೋರಿಕೆಯ ಅರ್ಜಿಯನ್ನು ತಿರಸ್ಕರಿಸಬೇಕಾಗಿ ವಿನಂತಿಸಿರುತ್ತಾರೆ.

ಈ ಪ್ರಕರಣದಲ್ಲಿ ಈ ನ್ಯಾಯಾಲಯದಲ್ಲಿ ವಾಹನದ ತಾತ್ಕಾಲಿಕ ಬಿಡುಗಡೆ ಕೋರಿದ ಅರ್ಜಿ ಮತ್ತು ಎಪಿಪಿ ರವರು ಸಲ್ಲಿಸಿದ ಆಕ್ಷೇಪಣಾ ಪತ್ರ ಮತ್ತು ಪ್ರಕರಣದ ದಾಖಲಾತಿಗಳನ್ನು ಪರಿಶೀಲಿಸಿ ರೂ. 50000/- ಬ್ಯಾಂಕ್ ಗ್ಯಾರಂಟಿ ಅಥವಾ 50000/- ರೂ. ಗಳ ಯಾವುದಾದರೂ ಶ್ಯೂರುಟಿ ಬಾಂಡನ್ನು ದಾಖಲಾತಿಗಳ ಸಮೇತ ಹಾಜರುಪಡಿಸಲು ಷರತ್ತು ವಿಧಿಸಿ ವಾಹನವನ್ನು ತಾತ್ಕಾಲಿಕವಾಗಿ ಬಿಡುಗಡೆ ಮಾಡಲು ದಿನಾಂಕ 30.7.1988 ರಂದು ಆದೇಶ ಹೊರಡಿಸಲಾಗಿರುತ್ತದೆ. ವಾಹನದ ಮಾಲೀಕರು ಈ ನ್ಯಾಯಾಲಯವು ವಿಧಿಸಿರುವ ಷರತ್ತುಗಳನ್ನು ಪೂರೈಸಿ ವಾಹನವನ್ನು ತಾತ್ಕಾಲಿಕ ವಶಕ್ಕೆ ಪಡೆದಿರುತ್ತಾರೆ.

ಈ ಪ್ರಕರಣದ ಬಗ್ಗೆ ಅಂತಿಮ ಆದೇಶ ಹೊರಡಿಸಲು ದಿನಾಂಕ: 26.7.90 ರಿಂದ 9.6.2004ರ ವರೆಗೆ ವಿವಿಧ ದಿನಾಂಕಗಳಂದು ನಿಗದಿಪಡಿಸಿ ಈ ನ್ಯಾಯಾಲಯದಲ್ಲಿ ವಿಚಾರಣೆ ನಡೆಸಿರುತ್ತದೆ. ಅಭಿಯೋಜನಾವತಿಯಿಂದ ಪಿಡಬ್ಲ್ಯೂ-1 ಸಾಕ್ಷಿದಾರ ವಿ. ಗೋಪಾಲ ವಲಯ ಅರಣ್ಯಾಧಿಕಾರಿ ಮೈಸೂರು ಪೇಪರ್ ಮಿಲ್ಸ್ ಭದ್ರಾವತಿ ಪಿಡಬ್ಲ್ಯೂ-2 ಸಾಕ್ಷಿದಾರರಾಗಿ ಎ. ಕೆ. ಬಸವರಾಜಪ್ಪ ವನಪಾಲಕ ಶಿವನಿ ಶಾಖೆ ಅಜ್ಜಂಪುರ ವಲಯ ಹಾಗೂ ಪಿಡಬ್ಲ್ಯೂ-3 ಸಾಕ್ಷಿದಾರರಾಗಿ ನಿಂಗೇಗೌಡ ನಿವೃತ್ತ ಅರಣ್ಯ ರಕ್ಷಕ ತರೀಕೆರೆ ಇವರುಗಳು ಸಾಕ್ಷಿ ನುಡಿದಿರುತ್ತಾರೆ. ಪ್ರತಿವಾದಿಗಳ ಪರವಾಗಿ ವಕೀಲರು ಹಾಜರಾಗಿದ್ದು ಯಾವುದೇ ಸಾಕ್ಷಿಗಳನ್ನು ಹಾಜರುಪಡಿಸಿ ಹೇಳಿಕೆ ದಾಖಲಿಸಿರುವುದಿಲ್ಲ.

ಈ ಮೇಲ್ಕಂಡ ಎಲ್ಲಾ ದಾಖಲಾತಿಗಳನ್ನು ಪರಿಶೀಲಿಸಿ ಈ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡ ವಾಹನದ ಬಗ್ಗೆ ಅಂತಿಮ ಆದೇಶ ಹೊರಡಿಸಲು ಈ ಕೆಳಕಂಡ ಅಂಶಗಳನ್ನು ಪರಿಶೀಲಿಸುವುದು ಅವಶ್ಯಕವಾಗಿದೆ.

**ಅಂಶ:-1**

ವಾಹನ ಲಾರಿ ನಂ. ಸಿಎನ್‌ಎಸ್ 5005 ನ್ನು ದಿನಾಂಕ: 26.5.1988 ರಂದು ಕಾಡುಜಾತಿ ತುಂಡುಗಳು 355 ಸಂಖ್ಯೆ ಕಳ್ಳ ಸಾಗಾಣಿಕೆಯ ಸಂಬಂಧ ಅಮಾನತ್ತುಪಡಿಸಿರುವುದಾಗಿ ಹಾಗೂ ಇದರಿಂದ ಅರಣ್ಯ ಅಪರಾದ ಪ್ರಕರಣ ದಾಖಲಾಗಿದೆಯೇ?

**ಅಂಶ:-2**

ಅಂಶ 1 ರುಜುವಾತು ಆದಲ್ಲಿ ಸದರಿ ಅಪರಾದವು ವಾಹನದ ಮಾಲೀಕರಿಗೆ ಅಥವಾ ಅವರ ಪ್ರತಿನಿಧಿಗೆ ಅವರ ಚಾರ್ಜ್ ಪಡೆದವರಿಗೆ (ಚಾಲಕರಿಗೆ) ತಿಳುವಳಿಕೆ ಮತ್ತು ಶಾಮೀಲಾಗಿರದೇ ಅಪರಾದವಾಗಿದೆ ಎಂಬುದನ್ನು ಡಿಫೆನ್ಸ್ ರವರು ರುಜುವಾತುಪಡಿಸಿರುವರೇ ಹಾಗೂ ಅವರೆಲ್ಲರೂ ಅಗತ್ಯವಾದ ಮತ್ತು ಸಾಧ್ಯವಾಗಬಹುದಾದ ಎಲ್ಲಾ ರೀತಿಯ ಮುಂಜಾಗ್ರತೆ ಕ್ರಮ ಕೈಗೊಂಡಿರುವರೇ ಎಂದು ರುಜುವಾತು ಪಡಿಸಿರುತ್ತಾರೆಯೇ?

**ಅಂಶ:-3**

**ಕಾರಣಗಳು**

**ಅಂಶ:-1**

ದಿನಾಂಕ: 26.5.1988 ರಂದು ಬೆಳಗಿನ ಜಾವ 5.30ರ ಸಮಯದಲ್ಲಿ ಶಾಂತಿಸಾಗರ ವಲಯದ ಸೂಳೆಕೆರೆ ಶಾಖೆಯ ಅರಣ್ಯ ಪಾಲಕರ ಮತ್ತು ಸಿಬ್ಬಂದಿಯವರು ಸೂಳೆಕೆರೆ ಮನ್ನಾ ಜಂಗಲಿ ವ್ಯಾಪ್ತಿಯ ದೊಡ್ಡ ಮಟ್ಟಿಯ ಗಾಡಿ ದಾರಿಯಲ್ಲಿ ಅಕ್ರಮವಾಗಿ 355 ಕಾಡು ಜಾತಿಯ ತುಂಡುಗಳನ್ನು ಸಾಗಾಣಿಕೆ ಮಾಡುತ್ತಿರುವುದು 2 ಜನ ಅಪರಾಧಿಗಳ ಸಮೇತ ವಶಪಡಿಸಿಕೊಂಡು ಸ್ಥಳದಲ್ಲಿ ಪಂಚನಾಮೆ ಜರುಗಿಸಿ ಅಮಾನತ್ತುಪಡಿಸಿಕೊಂಡು ಅರಣ್ಯ ಮೊಕದ್ದಮೆ ದಾಖಲು ಮಾಡಿ ವಶಪಡಿಸಿಕೊಂಡಿರುತ್ತಾರೆ. ಹಾಗೂ ಅರಣ್ಯ ಕಾಯಿದೆ 71 (ಎ) ಪ್ರಕಾರ ಕ್ರಮ ಜರುಗಿಸಲು ಪ್ರಕರಣದ ದಾಖಲಾತಿಗಳನ್ನು ಒಪ್ಪಿಸಿ ಕೋರಿಕೊಂಡಿರುತ್ತಾರೆ. ಸದರಿ ಪ್ರಕರಣವನ್ನು ಅರಣ್ಯ ಕಾಯಿದೆ 71 (ಎ) ಪ್ರಕಾರ ಕ್ರಮ ಜರುಗಿಸಿ ವಶಪಡಿಸಿಕೊಂಡ ಲಾರಿ ಹಾಗೂ ಕಾಡುಜಾತಿ 355 ತುಂಡುಗಳನ್ನು ವಲಯ ಅರಣ್ಯಾಧಿಕಾರಿ ಚನ್ನಗಿರಿರವರ ವಶಕ್ಕೆ ಸುರಕ್ಷತೆಗೆ ನೀಡಿರುತ್ತದೆ.

ಈ ಪ್ರಕರಣದಲ್ಲಿ ಅಭಿಯೋಜನಾ ವತಿಯಿಂದ ಪಿಡಬ್ಲ್ಯೂ-1 ಶ್ರೀ ವಿ. ಗೋಪಾಲ್ ವಲಯ ಅರಣ್ಯಾಧಿಕಾರಿ ಇವರು ಹೇಳಿಕೆ ನೀಡಿದ್ದು ಅವರ ಹೇಳಿಕೆಯ ಪ್ರಕಾರ ದಿನಾಂಕ: 26.5.88 ರಂದು ಶಾಂತಿಸಾಗರ ವಲಯದ ಸೂಳೆಕೆರೆ ಶಾಖೆಯ ವನಪಾಲಕ ಮತ್ತು ಸಿಬ್ಬಂದಿಗಳು ಸೂಳೆಕೆರೆ ಎಸ್ಟೇಟ್ ಆವರಣದಲ್ಲಿ ಮದುರನಾಯಕನಹಳ್ಳಿ ಹತ್ತಿರ ಕಾಡುಜಾತಿ ಮರಗಳನ್ನು ತುಂಬಿದ ಲಾರಿ ಮತ್ತು 355 ತುಂಡುಗಳನ್ನು ಅಮಾನತ್ತುಪಡಿಸಿ ಅರಣ್ಯ

ಮೊಕದ್ದಮೆ ದಾಖಲು ಮಾಡಿ ನನ್ನ ಕಛೇರಿ ಆವರಣಕ್ಕೆ ತಂದರು ಸದರಿ ವಾಹನದ ಸಂಖ್ಯೆ: ಸಿಎನ್‌ಎಸ್ 5005 ಆಗಿರುತ್ತದೆ. ಸದರಿ ದಿನವೇ ವಾಹನ ಹಾಗೂ ಅರಣ್ಯ ಉತ್ಪನ್ನವನ್ನು ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ಮುಂದೆ ಹಾಜರುಪಡಿಸಲಾಯಿತು ಸದರಿ ಹಾಜರುಪಡಿಸಿದ ಪತ್ರವನ್ನು ನಿಶಾನೆ ಪಿ1 ಎಂದು ಗುರುತಿಸಲಾಯಿತು.

ಅರ್ಜಿದಾರರ ಪರ ವಕೀಲರು ಮಾಡಿದ ಪಾಟೀಸವಾಲಿನಲ್ಲಿ ಪ್ರಕರಣಕ್ಕೆ ಸಂಬಂಧಪಟ್ಟ ದಾಖಲಾತಿಗಳನ್ನು ಅಧಿಕಾರಿಯುತ ಅಧಿಕಾರಿಗಳಿಗೆ ಕಳುಹಿಸುವ ಮೊದಲು ಪರಿಶೀಲಿಸಿರುತ್ತಾರೆ ಲಾರಿಯ ಜೊತೆ ಇಬ್ಬರು ಅಪರಾಧಿಗಳನ್ನು ಹಾಜರುಪಡಿಸಿರುತ್ತಾರೆ. ಸದರಿ ಅಪರಾಧಿಗಳನ್ನು ನ್ಯಾಯಾಧೀಶರ ಮುಂದೆ ಹಾಜರುಪಡಿಸಲಾಯಿತು ಅರಣ್ಯಾಧಿಕಾರಿಗಳ ಮಾತು ಕೇಳಿ ಸುಳ್ಳು ಕೇಸ್ ಹಾಕಿರುವುದು ಎಂದು ಹೇಳುವುದು ಸರಿಯಲ್ಲ ಎಂದು ಹೇಳಿಕೆ ನೀಡಿರುತ್ತಾರೆ.

ದಿನಾಂಕ: 26.6.2002 ರಂದು ಎ. ಕೆ. ಬಸವರಾಜಪ್ಪ ವನಪಾಲಕ ಪಿಡಬ್ಲ್ಯೂ-2 ಸಾಕ್ಷಿದಾರರಾಗಿ ದಿನಾಂಕ: 27.11.2002 ರಂದು ನಿಂಗೇಗೌಡ ನಿವೃತ್ತ ಅರಣ್ಯ ರಕ್ಷಕ ಪಿಡಬ್ಲ್ಯೂ-3 ಸಾಕ್ಷಿದಾರರಾಗಿ ಹೇಳಿಕೆ ನೀಡಿರುತ್ತಾರೆ ಅವರ ಹೇಳಿಕೆ ಪ್ರಕಾರ ದಿನಾಂಕ: 26.5.88 ರಂದು ಸೂಳೆಕೆರೆ ಅರಣ್ಯ ಪ್ರದೇಶದಿಂದ ಅಕ್ರಮ ನಾಟಾ ಸಾಗಾಣಿಕೆಯಾಗುತ್ತಿದೆ ಅಂತ ವರ್ತಮಾನ ಇದ್ದುದರಿಂದ ವನಪಾಲಕ ಹಾಗೂ ಇತರೆ ಸಿಬ್ಬಂದಿಯವರು ಮದುರನಾಯಕನಹಳ್ಳಿ ಹತ್ತಿರ ಕಾಯುತ್ತಿರುವಾಗ ಒಂದು ಲಾರಿ ಬಂದಿತು ಅದನ್ನು ತಡೆದು ನಿಲ್ಲಿಸಿದಾಗ ಅದರಲ್ಲಿ ಕಾಡುಜಾತಿಯ ತುಂಡುಗಳು ಇದ್ದವು ಅವುಗಳನ್ನು ಎಣಿಸಿ ನೋಡಿದಾಗ ಒಟ್ಟು 355 ತುಂಡುಗಳು ಇದ್ದವು ಲಾರಿಯಲ್ಲಿ ಲಾರಿಯ ಚಾಲಕ ನಾಗರಾಜ ಬಿನ್ ಶ್ರೀನಿವಾಸ ಹಾಗೂ ವಿಶ್ವನಾಥನಾಯ್ಕ ಅಂತ ಇಬ್ಬರು ಮರದ ತುಂಡುಗಳ ಸಾಗಾಣಿಕೆ ಬಗ್ಗೆ ಯಾವುದೇ ಪರವಾನಿಗೆ ಹಾಜರುಪಡಿಸಲಿಲ್ಲ ಆದ್ದರಿಂದ ಸ್ಥಳದಲ್ಲಿಯೇ ಎಲ್ಲಾ 355 ಕಾಡು ಜಾತಿ ತುಂಡುಗಳನ್ನು ಕೆಂಪು ಬಣ್ಣದಿಂದ ಕ್ರಮ ಸಂಖ್ಯೆ ಕೊಟ್ಟು ಅಳತೆ ಮಾಡಿ ಅಮಾನತ್ತುಪಡಿಸಿಕೊಂಡೆವು ಲಾರಿ ಸಂಖ್ಯೆ ಸಿಎನ್‌ಎಸ್ 5005 ಆಗಿತ್ತು ಈ ಬಗ್ಗೆ ಸ್ಥಳದಲ್ಲಿಯೇ ಮಹಜರ್ ಮಾಡಲಾಗಿದ್ದು ಅದನ್ನು ನಿಶಾನೆ ಪಿ1 ಅಂತ ಹಾಗೂ ಸಾಕ್ಷಿಯ ಸಹಿಯನ್ನು ಪಿ1 ಮತ್ತು ಪಿಬಿ ಎಂದು ಗುರುತಿಸಲಾಯಿತು ನಂತರ ಲಾರಿ ಹಾಗೂ ಮರದ ತುಂಡುಗಳನ್ನು ಶಾಂತಿಸಾಗರ ವಲಯಕ್ಕೆ ತೆಗೆದುಕೊಂಡು ಹೋದೆವು ಆ ದಿನ ವಶಪಡಿಸಿಕೊಳ್ಳಲಾದ ಲಾರಿ ಹಾಗೂ ತುಂಡುಗಳನ್ನು ನೋಡಿದರೆ ಗುರುತಿಸುತ್ತೇನೆ. ನಾಗನಾಯ್ಕ ವನಪಾಲಕ ಈ ಬಗ್ಗೆ ಮೊಕದ್ದಮೆ ನೋಂದಾಯಿಸಿಕೊಂಡು ಪ್ರಥಮ ವರ್ತಮಾನ ವರದಿಯನ್ನು ಸಲ್ಲಿಸಿದ್ದು ವನಪಾಲಕ ರುಜುವಾತನ್ನು ಪಿ2 ಎಂದು ಗುರುತಿಸಿರುತ್ತಾರೆ.

ಅರ್ಜಿದಾರರ ಪರ ವಕೀಲರು ಮಾಡಿ ಪಾಟೀಸವಾಲಿನಲ್ಲಿ ಸಾಕ್ಷಿ ನೀಡಿದ್ದು ಘಟನೆ ದಿವಸ ಲಾರಿಯಲ್ಲಿ ಯಾವುದೇ ಮರ ಕಡಿಯುವ ಸಾಧನಗಳು ಇರಲಿಲ್ಲ ಲಾರಿ ಮಾಲೀಕರು ಯಾರು ಅಂತ ಹಾಗೇ ಅವರ ಪಾತ್ರ ಏನೂ ಅಂತ ನನಗೆ ಗೊತ್ತಿಲ್ಲ ಆ ದಿನ ಸದರಿ ಲಾರಿಯಲ್ಲಿ ಯಾವುದೇ ಮರದ ಸಾಗಾಣಿಕೆ ಆಗುತ್ತಿರಲಿಲ್ಲ ನಾವು ಸುಳ್ಳು ಕೇಸನ್ನು ಹಾಕಿದ್ದೇವೆ ಅನ್ನುವುದು ಸರಿಯಲ್ಲ ಎಂದು ಹೇಳಿಕೆ ನೀಡಿರುತ್ತಾರೆ.

ಮೇಲ್ಕಂಡ ಸಾಕ್ಷಿದಾರರು ಪಿಡಬ್ಲ್ಯೂ-1 ಪಿಡಬ್ಲ್ಯೂ-2 ಹಾಗೂ ಪಿಡಬ್ಲ್ಯೂ-3 ಇವರುಗಳು ನ್ಯಾಯಾಲಯಕ್ಕೆ ಹಾಜರಾಗಿ ನೀಡಿದ ಸ್ಥಳ ಮಹಜರ್ ಪ್ರಥಮ ಮಾಹಿತಿ ವರ್ತಮಾನ ವರದಿಯಲ್ಲಿರುವ ಅಂಶಗಳು ಒಂದಕ್ಕೊಂದು ತಾಳೆ ಹೊಂದಿದ್ದು ಯಾವುದೇ ವಿರೋಧ ಹೇಳಿಕೆಗಳು ಬಂದಿರುವುದಿಲ್ಲ ಅಲ್ಲದೇ ಅವರು ನೀಡಿದಂತಹ ಹೇಳಿಕೆಗಳು ಯಾವುದೇ ಸಂಶಯಕ್ಕೆ ಆಸ್ಪದ ನೀಡಿರುವುದಿಲ್ಲ. ಅಲ್ಲದೇ ಕರ್ನಾಟಕ ಅರಣ್ಯ ಕಾಯಿದೆ 1963 ಕಲಂ 62ರ ಪ್ರಕಾರ ಕ್ರಮ ಬದ್ಧವಾಗಿ ಲಾರಿ ನಂ. ಸಿಎನ್‌ಎಸ್ 5005 ರಲ್ಲಿ ಅಕ್ರಮವಾಗಿ ರಹದಾರಿಯಲ್ಲಿದ್ದ 355 ಕಾಡುಜಾತಿ ತುಂಡುಗಳು ಸಾಗಾಣಿಕೆ ಮಾಡಿರುವುದನ್ನು ಅಮಾನತ್ತುಪಡಿಸಿರುವುದು ದೃಢಪಡಿಸಿರುತ್ತಾರೆ. ಮತ್ತು ಅರಣ್ಯ ಕಾಯಿದೆ ಉಲ್ಲಂಘನೆ ಆಗಿರುವುದು ಸ್ಪಷ್ಟವಾಗಿ ತಿಳಿದು ಬಂದಿರುತ್ತದೆ ಆದ್ದರಿಂದ ಅಂಶ-1ಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

ದಿನಾಂಕ: 2.6.1988 ರಂದು ಅರ್ಜಿದಾರರಾದ ಶ್ರೀ ವಿಶ್ವನಾಥ್ ಪಿ. ಹಂಜಿ ಬಿನ್ ಪಕೀರಪ್ಪ ಹೆಚ್ ಹೊಸ ಬ್ರಹ್ಮಪುರ ಹರಿಹರ ಇವರು ಈ ನ್ಯಾಯಾಲಯಕ್ಕೆ ವಕೀಲರ ಮುಖಾಂತರ ಅರ್ಜಿಸಲ್ಲಿಸಿ ಲಾರಿ ಸಂಖ್ಯೆ: ಸಿಎನ್‌ಎಸ್ 5005ರ ಮಾಲೀಕರು ನನ್ನ ತಂದೆ ಪಕೀರಪ್ಪ ಹೆಚ್ ಆಗಿರುತ್ತಾರೆ ಅವರು 5.10.1986 ರಂದು ಮೃತಪಟ್ಟಿರುತ್ತಾರೆ ವಾಹನವನ್ನು ನನ್ನ ಹೆಸರಿಗೆ ಬದಲಾಯಿಸಿಕೊಳ್ಳಲು ಆರ್‌ಟಿಓ ಬೆಂಗಳೂರಿಗೆ ಪತ್ರ ಬರೆದು ಕೋರಿಕೊಂಡಿರುವುದಾಗಿ ತಿಳಿಸಿರುತ್ತಾರೆ ಅಲ್ಲದೇ ವಿಚಾರಣೆ ಸಮಯದಲ್ಲಿ ಮೂಲ ದಾಖಲಾತಿಗಳನ್ನು ಹಾಜರುಪಡಿಸುವುದಾಗಿಯೂ ಸಹ ವಿನಂತಿಸಿರುತ್ತಾರೆ. ಸದರಿ ವಾಹನವನ್ನು ವಲಯ ಅರಣ್ಯಾಧಿಕಾರಿ ಶಾಂತಿಸಾಗರ ಇವರು ದಿನಾಂಕ: 26.5.1988 ರಂದು ಅರಣ್ಯ ಉತ್ಪತ್ತಿಯ ಅಕ್ರಮ ಸಾಗಾಣಿಕೆ ಸಂಬಂಧ ವಶಪಡಿಸಿಕೊಂಡಿರುತ್ತಾರೆ. ಸದರಿ ವಾಹನದಿಂದಲೇ ಜೀವನ ಸಾಗುತ್ತಿದ್ದು ವಾಹನವನ್ನು ಬಾಡಿಗೆ ನೀಡಿ ಜೀವನ ನಿರ್ವಹಿಸ ಬೇಕಾಗಿರುತ್ತದೆ. ವಾಹನವನ್ನು ಫೈನಾನ್ಸ್ ರವರಿಂದ ಸಾಲ ಪಡೆದು ಖರೀದಿಸಿದ್ದು ಸಾಲವನ್ನು ತೀರಿಸಬೇಕಾಗಿರುತ್ತದೆ ವಾಹನವು ಕಛೇರಿಯ ಆವರಣದಲ್ಲಿರುವುದರಿಂದ ಮಳೆ ಬಿಸಿಲು ಹಾಗೂ ಗಾಳಿಗೆ ಸಿಕ್ಕಿ ಹಾಳಾಗುವ ಸಾಧ್ಯತೆಯಿದ್ದು ಉಪಯೋಗಕ್ಕೆ ಬಾರದಂತೆ ಆಗುತ್ತದೆ ಆದ್ದರಿಂದ ವಾಹನವನ್ನು ಬಿಡುಗಡೆ ಮಾಡಬೇಕಾಗಿ ವಿನಂತಿಸಿರುತ್ತಾರೆ.

ಈ ಮೇಲ್ಕಂಡ ಪ್ರಕರಣದ ಬಗ್ಗೆ ವಾಹನದ ಮಾಲೀಕರಿಗೆ ಅರಣ್ಯ ಕಾಯಿದೆ 1963 ಸೆಕ್ಷನ್ 71 (ಬಿ) ದಿನಾಂಕ: 4.6.98 ರಂದು ಕಾರಣ ಕೇಳಿ ತಿಳುವಳಿಕೆ ಪತ್ರ ನೀಡಿರುತ್ತದೆ. ವಾಹನದ ಮಾಲೀಕರು ದಿನಾಂಕ: 10.6.88 ರಂದು ಸಮಜಾಯಿಷಿ ನೀಡಿ ವಾಹನದಲ್ಲಿ ನಡೆದ ಅರಣ್ಯ ಅಪರಾಧ ಪ್ರಕರಣಕ್ಕೂ ನನಗೂ ಯಾವುದೇ ಸಂಬಂಧ ಇರುವುದಿಲ್ಲ ದಯಮಾಡಿ ವಾಹನ ಬಿಡುಗಡೆ ಮಾಡಬೇಕಾಗಿ ಕೋರಿರುತ್ತಾರೆ.

ಅರ್ಜಿದಾರರ ಅರ್ಜಿಯನ್ನು ಮತ್ತು ಸಹಾಯಕ ಸರ್ಕಾರಿ ಅಭಿಯೋಜಕರ ಆಕ್ಷೇಪಣೆಯನ್ನು ಪರಿಶೀಲಿಸಿ ಅರ್ಜಿದಾರರಿಗೆ ರೂ. 50,000/- ಬ್ಯಾಂಕ್ ಗ್ಯಾರಂಟಿ ಅಥವಾ ಶ್ಯೂರಿಟಿ ಬಾಂಡನ್ನು ದಾಖಲಾತಿಗಳ ಸಮೇತ ಹಾಜರುಪಡಿಸುವ ಷರತ್ತಿನೊಂದಿಗೆ ವಾಹನವನ್ನು ತಾತ್ಕಾಲಿಕ ಬಿಡುಗಡೆ ಮಾಡುವ ಬಗ್ಗೆ ದಿನಾಂಕ: 30.7.1988 ರಂದು ಆದೇಶ ಹೊರಡಿಸಿರುತ್ತದೆ. ವಾಹನದ ಮಾಲೀಕರು ನ್ಯಾಯಾಲಯದ ಷರತ್ತುಗಳನ್ನು ಪೂರೈಸಿ ವಾಹನವನ್ನು ವಶಕ್ಕೆ ಪಡೆದಿರುತ್ತಾರೆ. ಈ ಪ್ರಕರಣದ ಬಗ್ಗೆ ದಿನಾಂಕ: 26.7.90, 10.9.90, 5.10.91, 15.11.90, 30.11.90. 21.12.90. 14.1.91, 5.3.91, 3.5.91, 21.6.91, 26.7.91, 15.5.92, 28.11.98, 27.2.99, 22.5.99, 31.7.99, 31.5.2000, 19.7.2000, 7.3.2001, 13.6.2001, 8.8.2001, 17.10.2001, 26.6.2001, 14.8.2002, 27.1.2002, 29.1.2003, 26.3.2003, 27.8.2003, 10.12.2003, 28.1.2004, 24.3.2004, 19.5.2004, ಮತ್ತು 9.6.2004, ರ ದಿನಾಂಕಗಳಂದು ನೋಟೀಸ್ ಕಳುಹಿಸಿ ನ್ಯಾಯಾಲಯಕ್ಕೆ ಹಾಜರಾಗಲು ಸೂಚಿಸಿರುತ್ತದೆ ವಾಹನದ ಮಾಲೀಕರು ದಿನಾಂಕ: 28.11.98, 22.5.99, 31.7.99 ಹಾಗೂ 29.1.03 ರಂದು ಮಾತ್ರ ನ್ಯಾಯಾಲಯಕ್ಕೆ ಹಾಜರಾಗಿರುತ್ತಾರೆ ಅವರ ಪರ ವಕೀಲರು ಪ್ರತಿ ವಿಚಾರಣೆಗೂ ಹಾಜರಾಗಿದ್ದು ಅರ್ಜಿದಾರರ ಪರ ಯಾವುದೇ ಸಾಕ್ಷ್ಯಾಧಾರಗಳನ್ನು ಹಾಜರುಪಡಿಸಿರುವುದಿಲ್ಲ ಅಲ್ಲದೇ ಪದೇ ಪದೇ ಸಮಯಾವಕಾಶ ಕೋರಿದ್ದು ಅವರ ಕೋರಿಕೆಯನ್ನು ತಿರಸ್ಕರಿಸಿರುತ್ತದೆ.

ಅರ್ಜಿದಾರರ ವಾಹನದಲ್ಲಿ ಅರಣ್ಯ ಉತ್ಪನ್ನವಾದ ಕಾಡುಜಾತಿ 355 ತುಂಡುಗಳ ಸಾಗಾಣಿಕೆಗೆ ಬಳಕೆಯಾಗದಂತೆ ವಾಹನದ ಮಾಲೀಕರು ಅಥವಾ ಪ್ರತಿನಿಧಿಗಳು ಯಾವುದೇ ಮುನ್ನೆಚ್ಚರಿಕೆ ವಹಿಸಿದ ಬಗ್ಗೆ ಸಮರ್ಪಕವಾದ ಸಾಕ್ಷ್ಯಾಧಾರ ನೀಡಿರುವುದಿಲ್ಲ. ವಾಹನದಲ್ಲಿ ತನ್ನ ಗಮನಕ್ಕೆ ಬಾರದಂತೆ

ಈ ಕೃತ್ಯ ನಡೆದಿದೆ ಎಂಬುದನ್ನು ಕರ್ನಾಟಕ ಅರಣ್ಯ ಕಾಯಿದೆ ಕಲಂ 71 (ಬಿ) (2)ರ ರೀತ್ಯ ಸಾಬೀತುಪಡಿಸುವ ಜವಾಬ್ದಾರಿ ವಾಹನದ ಮಾಲೀಕರಿಗೆ ಸೇರಿದ್ದಾಗಿರುತ್ತದೆ. ಅಲ್ಲದೇ ವಾಹನದ ಮಾಲೀಕರ ಏಜೆಂಟರಾಗಲೀ ಚಾಲಕರಾಗಲೀ ಅಥವಾ ಇತರೆ ನಂಬಿಕೆ ಪ್ರತಿನಿಧಿಗಳು ವಾಹನದಲ್ಲಿ ಅಕ್ರಮ ಸಾಗಾಣಿಕೆ ಆಗದಂತೆ ಮುನ್ನೆಚ್ಚರಿಕೆ ವಹಿಸುವುದು ಸಹ ಇವರುಗಳ ಜವಾಬ್ದಾರಿಯಾಗಿರುತ್ತದೆ.

"Without prejudice to the provisions of sub-section (1), No order confiscating any tool, rope, chain, boat, vehicle or cattle shall be made under section 71A if the owner of the tool, rope, chain, boat, vehicle or cattle proves to the satisfaction of the authorised officer that it was used in carrying the timber, sandalwood, charcoal, firewood or ivory without the knowledge or connivance of the owner himself, his agent, if any, and the person in charge of the tool, rope, chain, boat, vehicle or cattle and that each of them had taken all reasonable and necessary precautions against such use."

ಲಾರಿ ನಂ. ಸಿಎನ್‌ಎಸ್ 5005ರ ವಾಹನದಲ್ಲಿ ಅರಣ್ಯ ಉತ್ಪನ್ನವು ಕಾನೂನು ಬಾಹಿರವಾಗಿ ಸಾಗಿಸದಂತೆ ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿದ್ದೇನೆ ಎಂಬುದನ್ನು ಸಾಕ್ಷಿ ಹಾಗೂ ಪುರಾವೆಗಳ ಸಹಿತ ಈ ಪ್ರಕರಣದಲ್ಲಿ ಸಾಬೀತುಪಡಿಸಲು ವಾಹನದ ಮಾಲೀಕರು ಹಾಗೂ ಅವರ ಪರ ವಕೀಲರು ಸಂಪೂರ್ಣ ವಿಫಲಗೊಂಡಿರುತ್ತಾದ್ದರಿಂದ ಪ್ರಕರಣದ ವಾಹನವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಹಾಲಿ ಪ್ರಕರಣಕ್ಕೆ ಕೇರಳ ರಾಜ್ಯದ ತೀರ್ಮಾನ ಕ್ರೈಮ್ಸ್ 2000 (3) ಪುಟ 563 ಅತ್ಯಂತ ಸರಿ ಹೊಂದುವಂತಹ ತೀರ್ಮಾನವಾಗಿರುತ್ತದೆ ಅದರ ಉದ್ಧೃತ ಭಾಗ ಈ ಕೆಳಕಂಡಂತಿದೆ.

"The contention that such a strict view would adversely affect an innocent vehicle owner cannot be countenanced since any narrow or liberal interpretation of confiscatory provisions in the Act can eventually lead to disastrous consequences for forest wealth which is a very endangered bounty of nature. The idea behind extension of confiscatory provisions to vehicles etc., is to convey a pre-emptory and explicit message to the vehicle owners not to allow their vehicles to be used for depletion of forest wealth. If any vehicle is caught in the nefarious act of carrying illicit forest produce, it is not enough that the owner establishes his innocence along. If he wants to retrieve his vehicle he must show further that the person who was in-charge of the vehicle has taken reasonable and necessary precautionary measures against such user of the vehicle. The owner cannot rest with establishing his innocence in the matter. It may be that having succeeded in showing his innocence his failure to establish the next limb might lead to hard consequences to him. Legislature intended, by providing such stringent conditions, to prevent harder consequences for the society and for the posterity."

ಕರ್ನಾಟಕ ಅರಣ್ಯ ಕಾಯಿದೆ ಕಲಂ 80ರ ಪ್ರಕಾರ ಯಾವುದೇ ಅರಣ್ಯ ಉತ್ಪನ್ನಗಳು ಅರಣ್ಯ ಪ್ರಕರಣದಲ್ಲಿ ಪ್ರಾಥಮಿಕ ಹಂತದಲ್ಲಿ ಸರ್ಕಾರದೆಂದೇ ಭಾವಿಸಬೇಕಾಗಿದ್ದು, ಆಪಾದನೆ ಹೊರಿಸಲ್ಪಟ್ಟ ವ್ಯಕ್ತಿ ಅಮಾನತ್ತುಪಡಿಸಿಕೊಂಡ ಮರವು ತನಗೆ ಸೇರಿದೆ ಎಂಬುದನ್ನು ಪುರಾವೆ ಮಾಡುವ ಹೊಣೆಯನ್ನು ಹೊರಬೇಕಾಗಿರುತ್ತದೆ.

"When in any proceedings taken under this Act or in consequence of anything done under this Act or under any other law for the time being in force, a question arises as to whether any forest produce is the property of the State Government, such produce shall be presumed to be the property of the State Government until the contrary is proved, and in case of any prosecution the burden of proving the contrary shall lie on the accused."

ಮೇಲ್ಕಂಡ ವಿದ್ಯಾಮಾನಗಳನ್ನು ಅವಲೋಕಿಸಿ ನೋಡಿದಾಗ ಅರ್ಜಿದಾರರ ತಿಳುವಳಿಕೆಗೆ ಬಂದು ಈ ಕೃತ್ಯ ನಡೆದಿದೆ ಹಾಗೂ ಅರ್ಜಿದಾರರು ಅಥವಾ ಅವರು ನೇಮಿಸಿದಂತಹ ವ್ಯಕ್ತಿಗಳು ಸಹ ಮೇಲ್ಕಂಡ ಅರಣ್ಯ ಉತ್ಪನ್ನ ಕಳ್ಳಸಾಗಾಣಿಕೆಯಲ್ಲಿ ಭಾಗವಹಿಸಿರುತ್ತಾರೆ ಎಂಬುದಕ್ಕೆ ಯಾವುದೇ ಸಂಶಯವಿರುವುದಿಲ್ಲ ಹಾಗೂ ಈ ವಾಹನವನ್ನು ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸಿದಂತೆ ವಾಹನದ ಮಾಲೀಕರು ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿರುವುದಿಲ್ಲ ಆದ್ದರಿಂದ ಅಂಶ 2 ನ್ನು ಇಲ್ಲವೆಂದು ಉತ್ತರಿಸಲಾಗಿದೆ.

ಮೇಲ್ಕಂಡ ಎಲ್ಲ ಅಂಶಗಳನ್ನು ಕೂಲಂಕುಶವಾಗಿ ಪರಿಶೀಲಿಸಲಾಗಿ

1. ಭದ್ರಾವತಿ ಅರಣ್ಯ ವಿಭಾಗದ ಶಾಂತಿಸಾಗರ ವಲಯದ ಸೂಳೆಕೆರೆ ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರು ದಿನಾಂಕ: 26.5.88 ರಂದು ಅಮಾನತ್ತುಪಡಿಸಿಕೊಂಡ ಲಾರಿ ನಂ. ಸಿಎನ್‌ಎಸ್ 5005 ವಾಹನದಲ್ಲಿ ಅಕ್ರಮವಾಗಿ ಕಾಡುಜಾತಿಯ 355 ತುಂಡುಗಳು ಸಾಗಾಣಿಕೆ ಆಗಿರುವುದು ಸ್ಥಳ ಮಹಜರ್ ಪ್ರಥಮ ಮಾಹಿತಿ ವರದಿಗಳಿಂದ ಹಾಗೂ ಅಭಿಯೋಜನಾ ಸಾಕ್ಷಿದಾರರು ನೀಡಿದ ಹೇಳಿಕೆಯಿಂದ ದೃಢಪಟ್ಟಿರುತ್ತದೆ.
2. ಅರ್ಜಿದಾರರ/ ವಾಹನದ ಮಾಲೀಕರು ಅವರ ಗಮನಕ್ಕೆ ಬಾರದೇ ಈ ಮೇಲ್ಕಂಡ ಪ್ರಕರಣ ನಡೆದಿದೆ ಎಂಬುದಕ್ಕೆ ಯಾವುದೇ ಸಾಕ್ಷಿಗಳನ್ನು ಹಾಜರುಪಡಿಸಿರುವುದಿಲ್ಲ ಅಲ್ಲದೇ ಅವರು ಸಹ ನ್ಯಾಯಾಲಯದ ನ್ಯಾಯಾಲಯಕ್ಕೆ ಹಾಜರಾಗದೇ ನ್ಯಾಯಾಲಯದ ಆದೇಶ ಉಲ್ಲಂಘನೆ ಮಾಡಿರುತ್ತಾರೆ ಆದ್ದರಿಂದ ವಾಹನವು ಕಳ್ಳಸಾಗಾಣಿಕೆಯಲ್ಲಿ ಭಾಗಿ ಆಗಿರುವುದಕ್ಕೆ ಯಾವುದೇ ಸಂಶಯವಿರುವುದಿಲ್ಲ.
3. ಅರ್ಜಿದಾರನು ಲಾರಿಯ ಆರ್ ಸಿ. ಮಾಲೀಕನಾಗಿರುವುದಿಲ್ಲ ಆರ್.ಸಿ. ಮಾಲೀಕರಾದ ಪಕೀರಪ್ಪ ಎಂಬುವರು ವಾರಸುದಾರನಿದ್ದೇನೆಂದು ತಿಳಿಸಿದ್ದು ಈ ಬಗ್ಗೆ ಯಾವುದೇ ಕಾಗದ ಪತ್ರಗಳನ್ನು ಹಾಜರುಪಡಿಸಿರುವುದಿಲ್ಲ.
4. ವಾಹನದ ಮಾಲೀಕರು ಶ್ರೀ ಪಕೀರಪ್ಪ ಇವರು ದಿನಾಂಕ: 5.10.1986 ರಲ್ಲಿ ಮೃತ ಹೊಂದಿರುವುದಾಗಿ ಅರ್ಜಿಯಲ್ಲಿ ತಿಳಿಸಿದ್ದು ವಾಹನ ಅಮಾನತ್ತುಪಡಿಸಿದ 2 ವರ್ಷ ಆದರೂ ಸಹ ವಾಹನದ ಮಾಲೀಕತ್ವವನ್ನು ಬದಲಾಯಿಸಿಕೊಳ್ಳದೇ ವಾಹನವನ್ನು ಚಲಿಸುತ್ತಿದ್ದದ್ದು ಕಾನೂನು ಬಾಹಿರವಾಗಿರುತ್ತದೆ.
5. ವಾಹನವನ್ನು ಅಕ್ರಮ ಅರಣ್ಯ ಉತ್ಪನ್ನ ಸಾಗಾಣಿಕೆಯಲ್ಲಿ ಅಮಾನತ್ತುಪಡಿಸಿ ವಾಹನ ಮಾಲೀಕತ್ವದ ದಾಖಲಾತಿಯನ್ನು ಸಲ್ಲಿಸಲು ಆದೇಶಿಸಿದಾಗ ವಾಹನದ ಮಾಲೀಕತ್ವವನ್ನು ನನ್ನ ಹೆಸರಿಗೆ ಬದಲಾಯಿಸಿಕೊಳ್ಳಲು ಆರ್‌ಟಿಓ ಬೆಂಗಳೂರಿನಲ್ಲಿ ವಿನಂತಿಸಿರುತ್ತೇನೆ ಎಂದು ತಿಳಿಸಿದ್ದು ಈ ಬಗ್ಗೆ ಸಹ ಯಾವುದೇ ಅಧಿಕೃತ ದಾಖಲಾತಿಯನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿರುವುದಿಲ್ಲ ಆದ್ದರಿಂದ ವಾಹನದ ಮಾಲೀಕರು ಅವರ ಅರ್ಜಿಯಲ್ಲಿ ತಿಳಿಸಿರುವ ವಿಷಯಗಳು ಸಹ ಒಂದು ಕಟ್ಟು ಕತೆಯೆಂದು ದೃಢಪಟ್ಟಿರುತ್ತದೆ.

6. ಅರಣ್ಯ ಕಾಯಿದೆ 1963 ನಿಯಮ 71 (ಎ) ಯಿಂದ 71 (ಜಿ)ರಲ್ಲಿ ತಿಳಿಸಿರುವಂತೆ ಯಾವುದೇ ವಾಹನವು ಅರಣ್ಯ ಅಪರಾಧದಲ್ಲಿ ಅಕ್ರಮವಾಗಿ ತೊಡಗಿದ್ದ ಹಾಗೂ ಅಂತಹ ಅಕ್ರಮ ಚಟುವಟಿಕೆಯಲ್ಲಿ ವಾಹನದ ಮಾಲೀಕರು ಹಾಗೂ ಅವರು ನೇಮಕ ಮಾಡಿದಂತಹ ವ್ಯಕ್ತಿಗಳು ಭಾಗಿಯಾಗಿದ್ದಾರೆ ಎಂಬುದು ಸ್ಪಷ್ಟವಾಗಿ ತಿಳಿದುಬಂದಲ್ಲಿ ವಾಹನವನ್ನು ಏಕಪಕ್ಷೀಯವಾಗಿ ಸರ್ಕಾರಕ್ಕೆ ಮುಟ್ಟುಗೋಲು ಮಾಡಿಕೊಳ್ಳಬಹುದಾಗಿದೆ ಆದ್ದರಿಂದ ಈ ಕೆಳಗಿನಂತೆ ಆದೇಶ ನೀಡಲಾಗಿದೆ.

**ಅಂತಿಮ ಆದೇಶ**

ಈ ಮೇಲ್ಕಾಣಿಸಿದ ಪ್ರಕರಣಕ್ಕೆ ಸಂಬಂಧಿಸಿದಂತೆ ಎಲ್ಲಾ ಅಗತ್ಯ ದಾಖಲಾತಿಗಳನ್ನು ಪರಿಶೀಲಿಸಿ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀಮತಿ ಸೀಮಾಗರ್ಗ್ ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಭದ್ರಾವತಿ ವಿಭಾಗ, ಭದ್ರಾವತಿ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71 (ಎ) (2 ತಿದ್ದುಪಡಿ ಪ್ರಕಾರ) ಲಾರಿ ನಂ ಸಿ.ಎನ್.ಎಸ್ 5005 ಮತ್ತು ಅದರಲ್ಲಿ ಕಾಡುಜಾತಿ 355 ತುಂಡುಗಳನ್ನು ಏಕಪಕ್ಷೀಯವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವುದಾದಲ್ಲಿ ಈ ಆದೇಶ ಹೊರಡಿಸಿದ 30 ದಿವಸಗಳೊಳಗೆ ಸಲ್ಲಿಸಬಹುದಾಗಿದೆ ತಪ್ಪಿದ್ದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ. ಅಲ್ಲದೇ ಮೇಲ್ಕಂಡ ಅವಧಿ ಮೀರಿದ ಬಳಿ ವಾಹನ ಹಾಗೂ 355 ಕಾಡುಜಾತಿ ತುಂಡುಗಳನ್ನು ಕಾನೂನು ರೀತ್ಯ ವಿಲೇ ಮಾಡಲು ಕೂಡ ಆದೇಶಿಸಿದೆ.

ಈ ಅಂಶಗಳನ್ನು ಈ ದಿನ ದಿನಾಂಕ: 15.8.2004 ರಂದು ನ್ಯಾಯಾಲಯದ ಮೊಹರು ಹಾಗೂ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಸೀಮಾಗರ್ಗ್**
ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ,
ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ ಭದ್ರಾವತಿ.

**ಅನುಬಂಧ**

1. ಫಿರ್ಯಾದಿದಾರರ ಪರ ಸಾಕ್ಷಿಗಳ ವಿಚಾರಣೆ
1. ಪಿಡಬ್ಲ್ಯೂ- 1 ಶ್ರೀ ವಿ. ಗೋಪಾಲ ವಲಯ ಅರಣ್ಯಾಧಿಕಾರಿ ಮೈಸೂರು ಪೇಪರ್ ಮಿಲ್ಸ್
2. ಪಿಡಬ್ಲ್ಯೂ- 2 ಶ್ರೀ ಎ. ಕೆ. ಬಸವರಾಜಪ್ಪ ವನಪಾಲಕ ಶಿವನಿ ಶಾಖೆ ಅಜ್ಜಂಪುರ
3. ಪಿಡಬ್ಲ್ಯೂ-3 ನಿಂಗೇಗೌಡ ನಿವೃತ್ತ ಅರಣ್ಯ ರಕ್ಷಕ ತರೀಕೆರೆ

**ಫಿರ್ಯಾದಿದಾರರ ಪರ ದಾಖಲಾತಿಗಳ ಪರಿಶೀಲನೆ**

1. ಪಿ1 ವಲಯ ಅರಣ್ಯಾಧಿಕಾರಿ ಶಾಂತಿಸಾಗರ ಇವರ ಪತ್ರ ದಿನಾಂಕ: 26.5.88 (ವಾಹನವನ್ನು ವಲಯ ಅರಣ್ಯಾಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಸಮಕ್ಷಮ ಹಾಜರುಪಡಿಸಿದ ಬಗ್ಗೆ)
2. ಪಿ1 ಸ್ಥಳ ಮಹಜರ್
3. ಪಿ1 ಎಪಿಡಬ್ಲ್ಯೂ-2 ಸಾಕ್ಷಿದಾರರ ಸಹಿ
4. ಪಿ1ಬಿ ಪಿಡಬ್ಲ್ಯೂ-3 ಸಾಕ್ಷಿದಾರರ ಸಹಿ
5. ಪಿ2 ಪ್ರಥಮ ಮಾಹಿತಿ ವರದಿ

4. ಪಿ2ಎ ನಾಗನಾಯ್ಕ ವನಪಾಲಕ ಸೂಳೆಕೆರೆರವರ ಸಹಿ

ಎಕ್ಸ್‌ಬಿಟ್-1
ಅರ್ಜಿದಾರರು ವಾಹನ ತಾತ್ಕಾಲಿಕ ಬಿಡುಗಡೆಗೆ ಸಲ್ಲಿಸಿದ ಅರ್ಜಿ ದಿನಾಂಕ: 26.6.1988
ಎಕ್ಸ್ ಬಿಟ್-2
ಮಧ್ಯಂತರ ಅರ್ಜಿಯ ಬಗ್ಗೆ ಆದೇಶ ದಿನಾಂಕ: 30.7.1988
ಅರ್ಜಿದಾರರ ದಾಖಲಾತಿಗಳ ಪರಿಶೀಲನೆ
ಯಾವುದು ಇರುವುದಿಲ್ಲ.

**ಸೀಮಾಗರ್ಗ್**
ಪಿ.ಆರ್.125
ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ,
ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ ಭದ್ರಾವತಿ.

## ರಾಜ್ಯ ಚುನಾವಣಾ ಆಯೋಗ, ಕರ್ನಾಟಕ

**ಕೆ.ಎಸ್.ಸಿ.ಎಂ.ಎಫ್. ಬಿಲ್ಡಿಂಗ್ (ಹಿಂಭಾಗ) ನಂ. 8, 1ನೇ ಮಹಡಿ, ಕನ್ನಿಂಗ್‌ಹ್ಯಾಂ ರಸ್ತೆ, ಬೆಂಗಳೂರು-560052**

**ಅಧಿಸೂಚನೆ ಸಂಖ್ಯೆ: ರಾಚುಆ 78 ಸಿಬ್ಬಂದಿ 2004 ದಿನಾಂಕ: 10ನೇ ಜನವರಿ 2005**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳು 2000ದ ನಿಯಮ 20ರ ಉದ್ದೇಶಕ್ಕಾಗಿ ರಾಜ್ಯ ಚುನಾವಣಾ ಆಯೋಗವು ಸಂಗ್ರಹಿಸುವ ಕಂಪ್ಯೂಟರ್‌ಗಳು, ಕಂಪ್ಯೂಟರ್ ಪೆರಿಫರಲ್‌ಗಳು ಮತ್ತು ಸಂಬಂಧಪಟ್ಟ ಸೇವೆಗಳ ಸಂಬಂಧದಲ್ಲಿ ಟೆಂಡರ್ ದಸ್ತಾವೇಜುಗಳನ್ನು ಪರಿಶೀಲಿಸಲು, ಟೆಂಡರ್‌ಗಳನ್ನು ತೆರೆಯುವ ಬಗ್ಗೆ ಮೇಲ್ವಿಚಾರಣೆ ಮಾಡಲು, ಪ್ರಾರಂಭಿಕ ಪರೀಕ್ಷೆಯನ್ನು ನಡೆಸಲು ಮತ್ತು ಸ್ವೀಕರಿಸುವ ಟೆಂಡರ್‌ಗಳನ್ನು ಸವಿವರವಾಗಿ ಮೌಲ್ಯ ಮಾಪನ ಮಾಡಲು ಮತ್ತು ಟೆಂಡರ್ ಅಂಗೀಕರಿಸುವ ಪ್ರಾಧಿಕಾರದ ಪರಿಗಣನೆಗಾಗಿ ಮೌಲ್ಯ ಮಾಪನ ವರದಿಯನ್ನು ಸಿದ್ಧಪಡಿಸಲು ಈ ಕೆಳಕಂಡ ಅಧಿಕಾರಿಗಳನ್ನು ಒಳಗೊಂಡ ಸಮಿತಿಗೆ ಅಧಿಕಾರ ನೀಡಲಾಗಿದೆ.

**ಸಮಿತಿ**

1. ಕಾರ್ಯದರ್ಶಿಗಳು, ರಾಜ್ಯ ಚುನಾವಣಾ ಆಯೋಗ
2. ಶ್ರೀ ಎಚ್.ಎಸ್.ಶಂಕರ, ಸೀನಿಯರ್ ಪ್ರೋಗ್ರಾಮರ್ ಕರ್ನಾಟಕ ಸರ್ಕಾರದ ಮಾಹಿತಿ ಮತ್ತು ತಂತ್ರಜ್ಞಾನ ನಿರ್ದೇಶನಾಲಯ, ಬಹುಮಹಡಿ ಕಟ್ಟಡ, ಬೆಂಗಳೂರು.

3. ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆಯ ಜಿಲ್ಲಾ ಪಂಚಾಯತ್ ಶಾಖೆಯ ಅಧೀನ ಕಾರ್ಯದರ್ಶಿ
4. ರಾಜ್ಯ ಚುನಾವಣಾ ಆಯೋಗದ ಅಧೀನ ಕಾರ್ಯದರ್ಶಿ-1

**ಎಚ್. ಎಸ್. ಉದಯಶಂಕರ**
ಅಧೀನ ಕಾರ್ಯದರ್ಶಿ

ಪಿ.ಆರ್.126

**ಪ್ರಾಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು ಬಿಜಾಪುರ ಜಿಲ್ಲೆ, ಬಿಜಾಪುರ ಇವರ ನ್ಯಾಯಾಲಯದಲ್ಲಿ**

**ಉಪಸ್ಥಿತರು :** ಶ್ರೀ ಕೆ. ಆರ್. ಗೌಡ್ರ ಪ್ರಾಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು ಬಿಜಾಪೂರ ಜಿಲ್ಲೆ, ಬಿಜಾಪುರ.

**ಪಿರ್ಯಾದಿದಾರರು :** ಶ್ರೀ ಪಿ. ಬಿ. ಶಿಂಧೆ ಅಬಕಾರಿ ಉಪ ನಿರೀಕ್ಷಕರು ಬ. ಬಾಗೇವಾಡಿ ಉಪವಲಯ ಗುನ್ನೆ ನಂ.2/2004-05, ದಿನಾಂಕ: 8.9.2004.

**ವಿರುದ್ಧ**

**ಆರೋಪಿತರು :** 1) ಯಾರು ಎಂಬುವರು ಗೊತ್ತಿರುವುದಿಲ್ಲಾ.
2) ಶ್ರೀ. ಯು ರಾಮನಾಥಭಟ್ಟ, ನಂ. 6. ಎಲ್.ಬಿ.ಎಸ್. ನಗರ ಕಾಮಾಕ್ಷಿ ಪಾಳ್ಯ ವಿಮಾನಪುರ ಹೆಚ್.ಎ.ಎಲ್., ಬೆಂಗಳೂರು-560017 (ವಾಹನದ ಮಾಲೀಕರು)

**ಪ್ರಸ್ತಾವನೆ:**

ದಿನಾಂಕ: 8.9.2004 ರಂದು ಬ. ಬಾಗೇವಾಡಿ ತಾಲ್ಲೂಕಿನ ತಳೆವಾಡ ಕ್ರಾಸ್ ಹತ್ತಿರ ಬೆಳಿಗ್ಗೆ 4.30 ಗಂಟೆಗೆ ವಾಹನ ಮ್ಯಾಕ್ಸ್: 100 ಸುಜುಕಿ ಮೋಟಾರ್ ಸೈಕಲ್ ನಂ. ಕೆಎ: 28 ಹೆಚ್: 8873 ರಲ್ಲಿ ಅಕ್ರಮವಾಗಿ ಒಂದು ಪ್ಲಾಸ್ಟಿಕ್ ಕ್ಯಾನಿನಲ್ಲಿ ಅಂದಾಜು 5 ಲೀಟರ್ ಕಳ್ಳಭಟ್ಟಿ ಸಾರಾಯಿ ಮತ್ತು ಕಳ್ಳಭಟ್ಟಿ ಸಾರಾಯಿ ತುಂಬಿದ 48 ಪ್ಲಾಸ್ಟಿಕ್ ಪಾಕೀಟುಗಳನ್ನು ಒಂದು ಬಿಳಿ ಚೀಲದಲ್ಲಿ ಹಾಕಿಕೊಂಡು ಸಾಗಿಸುತ್ತಿರುವುದನ್ನು ಪತ್ತೆ ಹಚ್ಚಿ ಅಬಕಾರಿ ಕಾಯ್ದೆ ಕಲಂಗಳ ಉಲ್ಲಂಘನೆಗಾಗಿ ಸ್ಥಳ ಪಂಚನಾಮೆ ಜರುಗಿಸಿ ಅಬಕಾರಿ ಉಪ ನಿರೀಕ್ಷಕರು ಬ. ಬಾಗೇವಾಡಿ ಉಪ ವಲಯ ಇವರು ವಾಹನ ಮತ್ತು ಕಳ್ಳಭಟ್ಟಿ ಸಾರಾಯಿಯನ್ನು ಜಪ್ತು ಮಾಡಿ ಗುನ್ನೆ ನಂ. 2/2004-05, ದಿನಾಂಕ: 08.09.2004 ರಂದು ದಾಖಲಿಸಿಕೊಂಡು ದಾಖಲಾತಿಗಳ ಪ್ರತಿಗಳೊಂದಿಗೆ ಈ ಪ್ರಾಧಿಕಾರಕ್ಕೆ ವರದಿಯನ್ನು ಸಲ್ಲಿಸಿರುತ್ತಾರೆ. ಆರೋಪಿತರು ಯಾರು ಎಂಬುದು ಪತ್ತೆ ಆಗಿರುವುದಿಲ್ಲಾ. ವಶಪಡಿಸಿಕೊಂಡಿರುವ ವಾಹನ ನಂ. ಕೆಎ: 28 ಹೆಚ್: 8873ನ್ನು ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿ ಸಾಗಿಸಲು ಉಪಯೋಗಿಸಿದ್ದು, ಮೇಲ್ನೋಟಕ್ಕೆ ಈ ಪ್ರಾಧಿಕಾರಕ್ಕೆ ಕಂಡು ಬಂದಿರುತ್ತದೆ.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಬಿಜಾಪುರ ಇವರಿಗೆ ಪತ್ರವನ್ನು ಬರೆದು ಬಿ-ಎಕ್ಸ್‌ಟ್ರ್ಯಾಕ್ಟ್ ಆಧಾರದ ಮೇಲೆ ವಾಹನದ ಮಾಲೀಕರಾದ ಶ್ರೀ ಯು. ರಾಮನಾಥಭಟ್ಟ ಸಾ: ಸಿಂಡಿಕೇಟ್ ಬ್ಯಾಂಕ್ ಮೇನ್ ಬ್ರ್ಯಾಂಚ್ ಬಿಜಾಪುರ ಇವರಿಗೆ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ಪ್ರಕಾರ ಕಾರಣ ಕೇಳುವ ನೋಟೀಸನ್ನು ದಿನಾಂಕ: 20.09.2004 ರಂದು ಈ ಪ್ರಾಧಿಕಾರದಿಂದ ನೋಟಿಸು ತೆಗೆಯಲಾಗಿತ್ತು. ಅಬಕಾರಿ ಉಪ ನಿರೀಕ್ಷಕರು ಬ. ಬಾಗೇವಾಡಿ ಉಪ ವಲಯ ಇವರು ನೋಟಿಸನ್ನು ಜಾರಿ ಮಾಡಲು ಹೋದಾಗ ಸಿಂಡಿಕೇಟ್ ಬ್ಯಾಂಕ್ ಮ್ಯಾನೇಜರ್ ಇವರನ್ನು ಸಂಪರ್ಕಿಸಿದ್ದಾಗ ಶ್ರೀ. ಯು ರಾಮನಾಥಭಟ್ಟ ಇವರು ಬೆಂಗಳೂರಿಗೆ ವರ್ಗವಾಗಿರುತ್ತಾರೆ ಅಂತಾ ತಿಳಿಸಿರುತ್ತಾರೆ. ಎಂದು ಅಬಕಾರಿ ಉಪ ನಿರೀಕ್ಷಕರು ಬ.ಬಾಗೇವಾಡಿ ಉಪವಲಯ ಇವರು ವರದಿಯಲ್ಲಿ ತಿಳಿಸಿರುತ್ತಾರೆ. ಆದ ಕಾರಣ ರೀಜನಲ್ ಮ್ಯಾನೇಜರ್ ಸಿಂಡಿಕೇಟ್ ಬ್ಯಾಂಕ್ ಬಿಜಾಪುರ ಇವರಿಗೆ ದಿನಾಂಕ: 16.10.2004 ರಂದು ಪತ್ರ ಬರೆದು ಶ್ರೀ ಯು. ರಾಮನಾಥಭಟ್ಟ ಇವರ ವಿಳಾಸ ಪಡೆದುಕೊಂಡು ದಿನಾಂಕ: 18.10.2004 ರಂದು ಮತ್ತೆ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ಪ್ರಕಾರ ಕಾರಣ ಕೇಳುವ ನೋಟಿಸು ತೆಗೆದು ನೋಂದಾಯಿತ ಅಂಚೆ ಮೂಲಕ ಕಳಿಸಲಾಗಿತ್ತು. ಸ್ವೀಕೃತ ಪತ್ರ ದಿನಾಂಕ: 8.11.2004 ರಂದು ಈ ಪ್ರಾಧಿಕಾರಕ್ಕೆ ಬಂದಿರುತ್ತದೆ. ಅದರಂತೆ ಸಂಕಲನಾಧಿಕಾರಿಗಳು ಕರ್ನಾಟಕ ರಾಜ್ಯಪತ್ರ ವಿಭಾಗ ಸರ್ಕಾರಿ ಹೊರ ವಲಯ ಮುದ್ರಣಾಲಯ ಮೈಸೂರು ರಸ್ತೆ ಬೆಂಗಳೂರು-59 ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಲು ಪತ್ರ ಬರೆಯಲಾಯಿತ್ತು. ದಿನಾಂಕ: 11.11.2004 ರಂದು ಗುರುವಾರ ಭಾಗ-3 ಪುಟ ಸಂಖ್ಯೆ: 1944 ರಲ್ಲಿ ಪ್ರಕಟಿಸಲಾಗಿದೆ.

ಸದರಿ ವಾಹನದ ಮಾಲೀಕರಿಗೆ ಈ ನೋಟಿಸು ತಲುಪಿದ 15 ದಿನಗಳ ಒಳಗಾಗಿ ನಿಮ್ಮ ತಕರಾರುಗಳಾಗಲೀ ದಾಖಲಾತಿಗಳೊಂದಿಗೆ ಈ ಪ್ರಾಧಿಕಾರಕ್ಕೆ ಲಿಖಿತವಾಗಿ ಸಲ್ಲಿಸತಕ್ಕದ್ದು. ತಪ್ಪಿದಲ್ಲಿ ನಿಮ್ಮ ಹೇಳಿಕೆ ಏನು ಇಲ್ಲವೆಂದು ಪರಿಗಣಿಸಿ ಅಬಕಾರಿ ಕಾಯ್ದೆ ಕಲಂ 43 (ಎ) ಅಡಿಯಲ್ಲಿ ನಿಮ್ಮ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಏಕಪಕ್ಷೀಯವಾಗಿ ಕ್ರಮ ಜರುಗಿಸಲಾಗುವುದು. ಎಂದು ತಿಳಿಸಲಾಗಿತ್ತು ಇಲ್ಲಿಯ ತನಕ ಯಾವುದೇ ವಾಹನದ ಮಾಲೀಕರು ಹಕ್ಕನ್ನು ಸ್ಥಾಪಿಸಿರುವುದಿಲ್ಲ ಮತ್ತು ಅವರಿಂದ ಯಾವುದೇ ಅಹವಾಲು ಬಂದಿರುವುದಿಲ್ಲ.

ಈ ಪ್ರಕರಣದಲ್ಲಿ ಮಾದರಿಯಾಗಿ ತೆಗೆದ ಕಳ್ಳಭಟ್ಟಿ ಸಾರಾಯಿ ರಸಾಯನಿಕ ಪ್ರಯೋಗಾಲಯಕ್ಕೆ ಕಳುಹಿಸಿ ವರದಿ ಪಡೆಯಲಾಗಿದೆ ರಸಾಯನಿಕ ತಜ್ಞರು ಮಾದರಿಗಳಲ್ಲಿ ಮದ್ಯಸಾರವು ಇದ್ದು ಮಾನವ ಸೇವನೆಗೆ ಯೋಗ್ಯವಿಲ್ಲವೆಂದು ದೃಢೀಕರಿಸಿರುತ್ತಾರೆ. ಅಬಕಾರಿ ಉಪ ನಿರೀಕ್ಷಕರು ಬ.ಬಾಗೇವಾಡಿ ಉಪವಲಯ ಇವರು ವರದಿ ಸಲ್ಲಿಸಿ ಸದರಿ ವಾಹನವನ್ನು ಇಡಲು ಸ್ಥಳಾವಕಾಶ ಇಲ್ಲದೇ ಇರುವುದರಿಂದ ಮತ್ತು ವಾಹನವು ಮಳೆ, ಗಾಳಿ, ಬಿಸಿಲಿಗೆ ಸಿಕ್ಕಿ ಹಾಳಾಗುವುದರಿಂದ ಮತ್ತು ಹವಮಾನದ ವೈಪರೀತ್ಯಗಳಿಗೆ ದಿನೆ ದಿನೆ ತನ್ನ ಗುಣಮಟ್ಟವನ್ನು ಕಳೆದುಕೊಳ್ಳುವ ಸಂಭವ ಇದ್ದು ಅದರ ಮೌಲ್ಯವು ಕಡಿಮೆಯಾಗುವ ಸಾಧ್ಯತೆ ಇರುವುದರಿಂದ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ವರದಿ ಸಲ್ಲಿಸಿರುತ್ತಾರೆ.

ಸದರಿ ಪ್ರಕರಣವು ದಾಖಲಾಗಿ ಸುಮಾರು 4 ತಿಂಗಳು ಕಳೆದರೂ ಈವರೆಗೆ ಯಾವುದೇ ವ್ಯಕ್ತಿಯು ವಾಹನ ತನ್ನದೆಂದು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷ್ಯಾಧಾರಗಳೊಂದಿಗೆ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲಾ, ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಲಾಗಿ ವಾಹನದಲ್ಲಿ ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಿಸುತ್ತಿರುವುದು ದೃಢಪಟ್ಟಿರುತ್ತದೆ. ಲಭ್ಯವಿರುವ ದಾಖಲೆ ಪುರಾವೆಗಳನ್ನು ಅವಲೋಕಿಸಿ ಕೂಲಂಕುಷವಾಗಿ ಪರಿಶೀಲಿಸಿ ಸದರಿ ವಶಪಡಿಸಿಕೊಂಡ ವಾಹನವನ್ನು ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಭಾವಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: EXE/BJP/DTCR/19/2004-05 ದಿನಾಂಕ: 10ನೇ ಜನವರಿ 2005**

ಕೆ. ಆರ್. ಗೌಡ್ರ ಪ್ರಾಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು ಬಿಜಾಪುರ ಜಿಲ್ಲೆ, ಬಿಜಾಪುರ ಆದ ನಾನು, ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43 (ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಸುಜುಕಿ ಮ್ಯಾಕ್ಸ್ 100 ಕೆಎ: 28 ಹೆಚ್:8873, ನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ಹೊರಡಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 10.01.2005 ರಂದು ವಿಷಯ ನಿರ್ವಾಕರಿಗೆ ಉಖ್ತುಲೇಖನ ನೀಡಿ ನಂತರ ಬೆರಳಚ್ಚು ಮಾಡಿಸಿ ನಂತರ ಬೆರಳಚ್ಚಿಸಿದ ಪ್ರತಿಯನ್ನು ಗಣಕೀಕೃತಗೊಳಿಸಿ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಅಮಲಿನಲ್ಲಿ ಬರುತ್ತದೆ.

**ಕೆ. ಆರ್. ಗೌಡ್ರ**

ಪಿ.ಆರ್.127 ಪ್ರಾಧಿಕೃತ ಅಧಿಕಾರಿ ಹಾಗೂ, ಅಬಕಾರಿ ಅಧೀಕ್ಷಕರು, ಬಿಜಾಪುರ ಜಿಲ್ಲೆ, ಬಿಜಾಪುರ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರ ನ್ಯಾಯಾಲಯ, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು-18**

**ದಾವಾ ಅರ್ಜಿ ಸಂಖ್ಯೆ: ಜೆಆರ್‌ಬಿ:ಡಿಸ್:1209:2002-03 ದಿನಾಂಕ: 11ನೇ ಜನವರಿ 2005**

**ವಾದಿ:** **ವಿರುದ್ಧ** **ಪ್ರತಿವಾದಿಗಳು:**

**ಪ್ರಧಾನ ವ್ಯವಸ್ಥಾಪಕರು,**
ಸರ್ ಎಂ. ವಿಶ್ವೇಶ್ವರಯ್ಯ ಸಹಕಾರ ಬ್ಯಾಂಕ್ ನಿಯಮಿತ,
ನಂ. 10/ಎ, ಅಂಬಿಕಾ, ಶಂಕರ ಮಠ ರಸ್ತೆ
ಬೆಂಗಳೂರು-560018.

1. ಶ್ರೀ ಆರ್. ಆರ್. ಜಗನ್‌ಮೋಹನ್,
ನಂ. 152, ಕೆ.ಹೆಚ್.ಬಿ. ಕಾಲೋನಿ, ಶಕ್ತಿ ಎಂಟರ್‌ಪ್ರೈಸಸ್,
ಕೋರಮಂಗಲ ಬಡಾವಣೆ, ಬೆಂಗಳೂರು-95.
2. ಶ್ರೀ ಪ್ರಸನ್ನಕುಮಾರ್
ನಂ. 228, ಚೆಲುವಯ್ಯ ಬಿಲ್ಡಿಂಗ್, ಸೇವಾ ಸ್ಕೂಲ್ ಮುಂಭಾಗ,
ರಾಮಮೂರ್ತಿ ನಗರ, ಬೆಂಗಳೂರು-16
3. ಶ್ರೀ ಜಿ. ವಿಶ್ವನಾಥನ್
ನಂ. 47, 1ನೇ ಮಹಡಿ, 2ನೇ ಕ್ರಾಸ್, 515 ಕಾಲೋನಿ,
ಹೆಚ್.ಎ.ಎಲ್. 3ನೇ ಹಂತ, ಬೆಂಗಳೂರು-560075.

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103ರ ರೀತ್ಯಾ ಸ್ಥಿರಾಸ್ತಿಯನ್ನು ಅಟ್ಯಾಚ್ ಮಾಡಿರುವ ಬಗ್ಗೆ ನೋಟೀಸು.**

ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70 ರನ್ವಯ ಈ ನ್ಯಾಯಾಲಯದ ಮುಂದೆ ಹೂಡಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಯಿಂದ ಒಟ್ಟು ರೂ. 57,112-00 ಗಳನ್ನು ದಿನಾಂಕ: 5.7.2002 ರಿಂದ ಶೇಕಡಾ 19 ರಂತೆ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ಈ ದಾವಾ ಅರ್ಜಿಯನ್ನು ದಾವಾ ಸಂಖ್ಯೆ: ಜೆಆರ್‌ಬಿ:ಡಿಸ್: 1209:2002-03 ರನ್ವಯ ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

2. ವಾದಿಯು ಅವರ ಈ ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ 1ನೇ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಚರ ಮತ್ತು ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment before Judgement) ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. 1ನೇ ಪ್ರತಿವಾದಿ ಅವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ವತ್ತನ್ನು ಮಾರಾಟ ಮಾಡಲು/ ಪರಭಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದೇ ಇದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್: ಡಿಕ್ರಿ ನೀಡಿದ್ದರೂ ಸದರಿ ಅವಾರ್ಡ್: ಡಿಕ್ರಿಯನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪ್ರತಿವಾದಿಗಳಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದೂ ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

3. ವಾದಿಯ ದಾವಾ ಅರ್ಜಿ ಮತ್ತು ಕಲಂ 103ರ ರೀತ್ಯಾ ಸಲ್ಲಿಸಿರುವ ಅರ್ಜಿಗಳನ್ನು ಕೂಲಂಕುಶವಾಗಿ ಪರಿಶೀಲಿಸಲಾಗಿ, ವಾದಿಯು ಕಲಂ 103ರ ಅರ್ಜಿಯಲ್ಲಿ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಅಲ್ಲದೇ 1ನೇ ಪ್ರತಿವಾದಿಯು ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡದಂತೆ: ಪರಭಾರೆ ಮಾಡದಂತೆ ತಡೆಯದೇ ಇದ್ದಲ್ಲಿ, ವಾದಿಯ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್/ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ. ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.

4. ಮೇಲಿನ ಪರಿಸ್ಥಿತಿಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರ.ಸಂ. ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಬಸವೇಗೌಡ, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು 1ನೇ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಚರ ಮತ್ತು ಸ್ಥಿರಾಸ್ತಿಯನ್ನು ಷರತ್ತಿಗೆ ಒಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

1ನೇ ಪ್ರತಿವಾದಿಯು ಒಂದು ವೇಳೆ ಈ ತೀರ್ಪಿಗೆ ಪೂರ್ವಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ.57,112-00 ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ ಖಾತೆಗೆ ಜಮಾ ಮಾಡಿ ದಿನಾಂಕ: 11.2.2005ರ ಒಳಗಾಗಿ ಅಧಿಕೃತ ಚಲನ್/ರಶೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಯು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೆ ಒಳಪಟ್ಟು ನೀಡಲಾಗಿರುವ ಈ ಅಟ್ಯಾಚ್‌ಮೆಂಟ್ ಆದೇಶವನ್ನು ಸ್ಥಿರೀಕರಿಸಲಾಗುವುದು. ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ಅಟ್ಯಾಚ್‌ಮೆಂಟ್ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಷೆಡ್ಯೂಲ್ ಆಸ್ತಿಯ ವಿವರ**

ಬೆಂಗಳೂರು ದಕ್ಷಿಣ ತಾಲ್ಲೂಕು ಕೆಂಗೇರಿ ಹೋಬಳಿಯ, ಕೆಂಗೇರಿ ಗ್ರಾಮ ಸರ್ವೇ ನಂ. 164 ಮತ್ತು 164/3 ರಲ್ಲಿರುವ ಖಾತಾ ಸಂಖ್ಯೆ: 150 ಆಗಿರುವ, ಪೂರ್ವದಿಂದ ಪಶ್ಚಿಮಕ್ಕೆ 40 ಅಡಿ, ಉತ್ತರದಿಂದ ದಕ್ಷಿಣಕ್ಕೆ 30 ಅಡಿ ಅಳತೆಯ ನಿವೇಶನ ಸಂಖ್ಯೆ: 124 ಹಾಗೂ ಇದರಲ್ಲಿ ಕಟ್ಟಲಾಗಿರುವ ವ್ಯಾಪಾರ ಮಳಿಗೆ, ವಾಸದ ಮನೆ ಇತ್ಯಾದಿ ಸೇರಿದಂತೆ ಚೆಕ್ಕುಬಂದಿ:

ಪೂರ್ವಕ್ಕೆ : ರಸ್ತೆ
ಪಶ್ಚಿಮಕ್ಕೆ : ನಿವೇಶನ ಸಂಖ್ಯೆ 132
ಉತ್ತರಕ್ಕೆ : ನಿವೇಶನ ಸಂಖ್ಯೆ 123
ದಕ್ಷಿಣಕ್ಕೆ : ನಿವೇಶನ ಸಂಖ್ಯೆ 125

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 11.1.2005 ರಂದು ನೀಡಿರುತ್ತೇನೆ.

**ಬಸವೇಗೌಡ**

ಪಿ.ಆರ್.128 ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಕಾರ್ಯಾಲಯ

**ನಂ: ಡಿಆರ್‌ಎಸ್:ಸಮಾಪನೆ:ಡಿಎಲ್‌ಎಸ್:68/2001-02 ದಿನಾಂಕ: 30ನೇ ಡಿಸೆಂಬರ್ 2004**

**ವಿಷಯ :** ಸರ್ಕಾರಿ ನೌಕರರ ಗ್ರಾಹಕರ ಸಹಕಾರ ಸಂಘ ನಿ., ಸೊರಬ, ಇದರ ನೋಂದಣಿ ರದ್ದತಿ ಬಗ್ಗೆ.

**ಉಲ್ಲೇಖ :** 1. ಈ ಕಛೇರಿಯ ಆದೇಶ ನಂ. ಡಿಆರ್‌ಎಸ್/ಸಮಾಪನೆ/ಡಿಎಲ್‌ಎಸ್/68/2001-02/ ದಿನಾಂಕ: 31.12.2001.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಪತ್ರ ನಂ: ಎಆರ್25/ಸಮಾಪನೆ/ರದ್ದತಿ/ಸಿಆರ್-3922/ 2004-05 ದಿನಾಂಕ: 09.12.2004.

ಸರ್ಕಾರಿ ನೌಕರರ ಗ್ರಾಹಕರ ಸಹಕಾರ ಸಂಘ ನಿ., ಸೊರಬ ಸೊರಬ ತಾ: ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಕಾರ್ಯಾಲಯದ ನೋಂದಣಿ ನಂ. 365/80- ದಿನಾಂಕ: 28.8.1980ರಲ್ಲಿ ನೋಂದಣಿಯಾಗಿದ್ದು, ಈ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯಾಗಿರುತ್ತದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದರಿಂದ ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಸಮಾಪನೆಗೆ ಆದೇಶಿಸಿದ್ದು, ಸಹಕಾರ ಅಭಿವೃದ್ಧಿ ಅಧಿಕಾರಿ ಸೊರಬ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿದೆ. ಸಮಾಪನಾಧಿಕಾರಿಯವರು ದಿನಾಂಕ: 16.5.2002 ರಂದು ಪ್ರಭಾರ ವಹಿಸಿಕೊಂಡು ಚರಾಸ್ತಿಯನ್ನು ವಿಲೇ ಮಾಡಿ ಸಂಘದ ಆಸ್ತಿ ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿ ಸರ್ಕಾರದ ಪಾಲು ಏನೂ ಇರುವುದಿಲ್ಲವೆಂದು ಮತ್ತು ಸ್ಥಿರಾಸ್ತಿ ಇಲ್ಲವೆಂದು ವರದಿ ಮಾಡಿ ದಿನಾಂಕ: 4.12.2004 ರಂದು ಅಂತಿಮ ಸಭೆ ನಡೆಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಸಾಗರ ಉಪ-ವಿಭಾಗದ ಸಹಾಯಕ ನಿಬಂಧಕರು, ಉಲ್ಲೇಖ (2)ರ ಪತ್ರದಲ್ಲಿ ನೋಂದಣಿ ರದ್ದತಿಗಾಗಿ ಶಿಫಾರಸ್ಸು ಮಾಡಿರುತ್ತಾರೆ.

ಸಾಗರ ಉಪ-ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಉಲ್ಲೇಖ (2)ರಲ್ಲಿಯ ಶಿಫಾರಸ್ಸು ಅನ್ವಯ ಮತ್ತು ಸರ್ಕಾರದ ವಿನಿಯೋಗಗಳು ಇಲ್ಲದ ಪ್ರಯುಕ್ತ ಹಾಗೂ ಆಸ್ತಿ ಜವಾಬ್ದಾರಿ ಶೂನ್ಯವಾಗಿರುವ ಕಾರಣ. ಈ ಸಂಘದ ಅಸ್ತಿತ್ವದಿಂದ ಸದಸ್ಯರಿಗಾಗಲಿ, ಸಾರ್ವಜನಿಕರಿಗಾಗಲೀ ಪ್ರಯೋಜನವಿಲ್ಲವೆಂದು ಮನಗಂಡು, ಸಂಘದ ನೋಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

## ಆದೇಶ

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ: ಸಿಎಂಡಬ್ಲ್ಯೂ/69/ಸಿಎಲ್‌ಎಂ/ 2000 ದಿನಾಂಕ: 21.11.2001ರ ಅನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಸರ್ಕಾರಿ ನೌಕರರ ಗ್ರಾಹಕರ ಸಹಕಾರ ಸಂಘ ನಿ., ಸೊರಬ ಸೊರಬ ತಾ: ಇದರ ನೋಂದಣಿ ನಂ.365/ 1980/ ದಿನಾಂಕ: 28.08.1980ನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ, ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು 3 ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ: 30ನೇ ಡಿಸೆಂಬರ್ 2004 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

ಪಿ.ಆರ್.130 ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

## ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು

**ವಿಷಯ :** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಮರಳೇಬೇಕುಪ್ಪ ಗ್ರಾಮದಲ್ಲಿ ಮಲ್ಟಿಕಲರ್ ಗ್ರಾನೈಟ್‌ಗಾಗಿ ಮೆ: ಇಂಡಿಯನ್ ರಾಕ್ಸ್ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 391 ರ ಗುತ್ತಿಗೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ :** 1. ಕೇಂದ್ರ ಕಛೇರಿ ಪತ್ರ ಸಂಖ್ಯೆ: ಗಭೂಇ:ಡಿಸಿಬಿ:ಕಗಗು 391:2003-04 154 ದಿನಾಂಕ: 12.4.2004.
2. ಉಪ ನಿರ್ದೇಶಕರು, ಕನಕಪುರ ರವರ ಪತ್ರ ಸಂಖ್ಯೆ: ಗಭೂಇ:ಉನಿಕ: ಕಗಗು 391:2004-05:7030 ದಿನಾಂಕ: 12.8.04

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಮರಳೇಬೇಕುಪ್ಪ ಗ್ರಾಮದ ಸರ್ವೆ ನಂ. 572 ರಲ್ಲಿ ಮೆ: ಇಂಡಿಯನ್ ರಾಕ್ಸ್ ರವರಿಗೆ 10.00 ಎಕರೆಗೆ ದಿನಾಂಕ: 6.11.2000 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿಸಿರುವ ಕಛೇರಿ ಪತ್ರದಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2004ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.2,89,329/- ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2ರಲ್ಲಿ ತಿಳಿಸಿದಂತೆ ಬಾಕಿ ಪಾವತಿಸದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಸರ್ಕಾರದ ಅಧಿಸೂಚನೆ 3 ಸಂಖ್ಯೆ: ಸಿಐ 418 ಎಂಆರ್‌ಸಿ 92 ದಿನಾಂಕ: 2.7.1994 ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ರದ್ದುಪಡಿಸಬೇಕಾಗಿರುತ್ತದೆ.

## ಆದೇಶ

**ಆದೇಶ ಸಂಖ್ಯೆ: ಗಭೂಇ:ಡಿಸಿಬಿ:ಕಗಗು:391:2004-05/15229 ದಿನಾಂಕ:13ನೇ ಜನವರಿ 2005**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕಿನ, ಮರಳೇಬೇಕುಪ್ಪ ಗ್ರಾಮದ ಸರ್ವೆ ನಂ. 572 ರಲ್ಲಿ

10.00 ಎಕರೆಗೆ ಮಲ್ಟಿಕಲರ್ ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 391ನ್ನು ಗುತ್ತಿಗೆ ಮೇಲಿನ ಬಾಕಿ ಪಾವತಿಸದ ಕಾರಣ ತಕ್ಷಣದಿಂದ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ. ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಜಾಮೀನು ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಮಾಡಿಕೊಳ್ಳಲಾಗಿದೆ.

ಪಿ.ಆರ್.133 ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಕಾರ್ಯಾಲಯ**

**ನಂ: ಡಿಆರ್‌ಎಸ್:ಸಮಾಪನೆ:ಡಿಎಲ್‌ಎಸ್:36/2003-04/1526 ದಿನಾಂಕ: 30ನೇ ಡಿಸೆಂಬರ್ 2004**

**ವಿಷಯ :** ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ಕೊಡಕಣಿ ಸೊರಬ ತಾ, ಇದರ ನೋಂದಣಿ ರದ್ಧತಿ ಬಗ್ಗೆ.

**ಉಲ್ಲೇಖ :** 1. ಈ ಕಛೇರಿಯ ಆದೇಶ ನಂ. ಡಿಆರ್‌ಎಸ್/ಸಮಾಪನೆ/ಡಿಎಲ್‌ಎಸ್/36/2003-04 ದಿನಾಂಕ: 13.02.2004

2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಪತ್ರ ನಂ: ಎಆರ್25/ಸಮಾಪನೆ/ರದ್ಧತಿ/ಸಿಆರ್-4072/ 2004-05 ದಿನಾಂಕ: 17.12.2004.

ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ಕೊಡಕಣಿ, ಸೊರಬ ತಾ: ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಕಾರ್ಯಾಲಯದ ನೋಂದಣಿ ನಂ.25413/98-99 ದಿನಾಂಕ: 09.06.1998 ರಲ್ಲಿ ನೋಂದಣಿಯಾಗಿದ್ದು, ಈ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯಾಗಿರುತ್ತದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದರಿಂದ ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಸಮಾಪನೆಗೆ ಆದೇಶಿಸಿದ್ದು, ಮಾರ್ಗಾಧಿಕಾರಿ ಶಿಮೂಲ್, ಸೊರಬ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿದೆ. ಸಮಾಪನಾಧಿಕಾರಿಯವರು ದಿನಾಂಕ: 22.3.2004 ರಂದು ಪ್ರಭಾರ ವಹಿಸಿಕೊಂಡು ಚರಾಸ್ತಿಯನ್ನು ವಿಲೇ ಮಾಡಿ ಸಂಘದ ಆಸ್ತಿ ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿ ಸರ್ಕಾರದ ಪಾಲು ಏನೂ ಇರುವುದಿಲ್ಲವೆಂದು ಮತ್ತು ಸ್ಥಿರಾಸ್ತಿ ಇಲ್ಲವೆಂದು ವರದಿ ಮಾಡಿ ದಿನಾಂಕ: 20.11.2004 ರಂದು ಅಂತಿಮ ಸಭೆ ನಡೆಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಸಾಗರ ಉಪ-ವಿಭಾಗದ ಸಹಾಯಕ ನಿಬಂಧಕರು, ಉಲ್ಲೇಖ (2)ರ ಪತ್ರದಲ್ಲಿ ನೋಂದಣಿ ರದ್ಧತಿಗಾಗಿ ಶಿಫಾರಸ್ಸು ಮಾಡಿರುತ್ತಾರೆ.

ಸಾಗರ ಉಪ-ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಉಲ್ಲೇಖ (2)ರಲ್ಲಿಯ ಶಿಫಾರಸ್ಸು ಅನ್ವಯ ಮತ್ತು ಸರ್ಕಾರದ ವಿನಿಯೋಗಗಳು ಇಲ್ಲದ ಪ್ರಯುಕ್ತ ಹಾಗೂ ಆಸ್ತಿ ಜವಾಬ್ದಾರಿ ಶೂನ್ಯವಾಗಿರುವ ಕಾರಣ. ಈ ಸಂಘದ ಅಸ್ತಿತ್ವದಿಂದ ಸದಸ್ಯರಿಗಾಗಲಿ, ಸಾರ್ವಜನಿಕರಿಗಾಗಲೀ ಪ್ರಯೋಜನವಿಲ್ಲವೆಂದು ಮನಗಂಡು, ಸಂಘದ ನೋಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ: ಸಿಎಂಡಬ್ಲ್ಯೂ/69/ಸಿಎಲ್‌ಎಂ/ 2000 ದಿನಾಂಕ: 21.11.2001ರ ಅನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ಕೊಡಕಣಿ ಸೊರಬ ತಾ: ಇದರ ನೋಂದಣಿ ನಂ.25413/1998-99/ ದಿನಾಂಕ: 09.06.1998 ನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ, ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು 3 ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ: 30ನೇ ಡಿಸೆಂಬರ್ 2004 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

ಪಿ.ಆರ್.131 ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ: ಆರ್‌ಸಿಎಸ್:ಎಲ್‌ಕ್ಯೂಡಿ:23:2004-05 ದಿನಾಂಕ: 12ನೇ ಜನವರಿ 2005**

**ವಿಷಯ :** ಸಮಾಪನೆಗೊಂಡ ಗಂಗಾಧರ ಫಿಷರ್‌ಮನ್ ಕೋ ಆಪ್ ಸೊಸೈಟಿ ಲಿ., ಬಳ್ಳಾರಿ ಇದರ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ :** 1. ಈ ಕಛೇರಿಯ ಸಮಾಪನಾದೇಶ ಸಂ: ಎಸ್‌ಎಲ್‌ಕ್ಯೂ:5:73-74 ದಿನಾಂಕ: 8.9.1975

2. ಸಹಕಾರ ಸಂಘಗಳ ಜಂಟಿ ನಿಬಂಧಕರು, ಗುಲ್ಬರ್ಗಾ ಪ್ರಾಂತ, ರಾಯಚೂರು ಇವರ ಸಂ:ಸಂನಿರಾ:ವಿ4:24: ಡಿಎಲ್‌ಎಸ್: 91-92:4035 ದಿನಾಂಕ: 21.9.2004.

3. ಸಮಾಪನಾಧಿಕಾರಿಗಳು ಇವರು ದಿನಾಂಕ: 31.5.2004 ರಂದು ನಡೆಸಿದ ಸಭಾ ನಡವಳಿಗಳು.

**ಪೀಠಿಕೆ:**

ಗಂಗಾಧರ ಫಿಷರ್‌ಮನ್ ಕೋ ಆಪರೇಟಿವ್ ಸೊಸೈಟಿ ಲಿ., ಬಳ್ಳಾರಿ ಈ ಸಹಕಾರ ಸಂಘವು ನೋಂದಣಿ ಕ್ರ:ವೈ:546:50-51 ದಿನಾಂಕ: 22.12.1950 ರಂದು ನೋಂದಾಯಿಸಲ್ಪಟ್ಟಿರುತ್ತದೆ. ಸಂಘದ ಕಾರ್ಯವ್ಯಾಪ್ತಿಯು ಜಿಲ್ಲಾ ಮಟ್ಟದ್ದಾಗಿರುತ್ತದೆ.

ಸದರಿ ಸಂಘ ವ್ಯವಹಾರಗಳು ದೀರ್ಘಕಾಲದಿಂದ ಸ್ಥಗಿತಗೊಂಡಿದ್ದರಿಂದ ಹಾಗೂ ಆಡಳಿತ ಮಂಡಳಿಗಾಗಲೀ ಸದಸ್ಯರಿಗಾಗಲೀ ಸಂಘವನ್ನು ನಡೆಸಿಕೊಂಡು ಹೋಗಲು ಆಸಕ್ತಿ ಇಲ್ಲದಿರುವ ಕಾರಣ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2)(ಬಿ) ರನ್ವಯ ಈ ಆದೇಶ ಸಂ:ಎಸ್‌ಎಲ್‌ಕ್ಯೂ:5:73-74 ದಿನಾಂಕ: 8.9.1975 ರಲ್ಲಿ ಸಮಾಪನೆಗೊಳಿಸಿ, ಸಹಕಾರ ಸಂಘಗಳ ಹಿರಿಯ ನಿರೀಕ್ಷಕರು (ಬೇಸಾಯ) ಬಳ್ಳಾರಿ ಇವರನ್ನು ಸಮಾಪನಾಧಿಕಾರಿಯಾಗಿ ನೇಮಿಸಲಾಗಿತ್ತು.

ಉಲ್ಲೇಖ (2)ರ ಪತ್ರದಲ್ಲಿ ಜಂಟಿ ನಿಬಂಧಕರು, ಗುಲ್ಬರ್ಗಾ ಪ್ರಾಂತ ಇವರು ಸದರಿ ಸಂಘವು ಸರ್ಕಾರಕ್ಕೆ ಪಾವತಿಸಬೇಕಾದ ಷೇರು ರೂ.400-00 ಮತ್ತು ಲೆಕ್ಕ ಪರಿಶೋಧನಾ ರೂ.48.00 ಗಳನ್ನು ಸರ್ಕಾರಕ್ಕೆ ಮರುಪಾವತಿಸಿರುತ್ತಾರೆ. ಸಮಾಪನಾಧಿಕಾರಿಗಳ ಅಡಾವೆ ಪತ್ರಿಕೆಯ ಪ್ರಕಾರ ಆಸ್ತಿಯ ಭಾಗದಲ್ಲಿ ರೂ.2017-10 ಗಳಿರುತ್ತದೆ. ಜವಾಬ್ದಾರಿ ಭಾಗದಲ್ಲಿ ರೂ.7768-23 ಗಳಿರುತ್ತದೆ. ಇವುಗಳ ಬಗ್ಗೆ ಯಾವ ವಿಧವಾದ ದಾಖಲಾತಿಗಳು ಇರುವುದಿಲ್ಲವೆಂದು ತಿಳಿಸಿರುತ್ತಾರೆ. ಉಲ್ಲೇಖ (3)ರ ಸಮಾಪನಾಧಿಕಾರಿಗಳ ಸಭಾ ನಡವಳಿಯಲ್ಲಿ ಸದರಿ ಸಂಘದ ನೋಂದಣಿ ರದ್ಧತಿಗೆ ಠರಾವು ಪಾಸು ಮಾಡಿರುತ್ತಾರೆ.

ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಸಂಘವನ್ನು ಯಥಾಸ್ಥಿತಿಯಲ್ಲಿ ಮುಂದುವರೆಸುವುದರಿಂದ ಸಾರ್ವಜನಿಕರಿಗಾಗಲೀ ಅಥವಾ ಸದಸ್ಯರಿಗಾಗಲೀ ಯಾವುದೇ ಪ್ರಯೋಜನಕಾರಿಯಾಗಿಲ್ಲವೆಂದು ಪರಿಗಣಿಸಿ ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಬೇಕೆಂದು ಸಹಕಾರ ಸಂಘಗಳ ಜಂಟಿ ನಿಬಂಧಕರು, ಗುಲ್ಬರ್ಗಾ ಪ್ರಾಂತ, ರಾಯಚೂರು ಇವರು ಶಿಫಾರಸ್ಸು ಮಾಡಿರುತ್ತಾರೆ.

ಈ ಅಂಶಗಳನ್ನು ಪರಿಗಣಿಸಿ ಪರಿಶೀಲಿಸಿ ಸದರಿ ಸಮಾಪನಾ ಸಂಘದ ನೋಂದಣಿಯನ್ನು ರದ್ದುಗೊಳಿಸುವುದು ಸಮಂಜಸವೆಂದು ಪರಿಭಾವಿಸಿ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಪೀಠಿಕೆಯಲ್ಲಿ ಪ್ರತಿಪಾದಿಸಲಾದ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಬಿ. ನಾಗರಾಜ, ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಕೇಂದ್ರ ಕಛೇರಿ, ಬೆಂಗಳೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರಡಿ ನನಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಗಂಗಾಧರ ಫಿಷರ್‌ಮನ್ ಕೋ ಆಪರೇಟಿವ್ ಸೊಸೈಟಿ ಲಿ., ಬಳ್ಳಾರಿ ಇದರ ನೋಂದಣಿ ಸಂ:546/50-51 ದಿನಾಂಕ: 22.12.1950 ನ್ನು ರದ್ದುಪಡಿಸಿರುತ್ತೇನೆ. ಇದರಿಂದಾಗಿ ಸಂಘವು ವಿಸರ್ಜನೆಗೊಂಡಿರುತ್ತದೆ.

ಈ ಆದೇಶವು ಸ್ವಸಹಿ ಹಾಗೂ ಕಚೇರಿಯ ಮುದ್ರೆಯೊಂದಿಗೆ ಈ ದಿನ ದಿನಾಂಕ: 12.1.2005 ರಂದು ಹೊರಡಿಸಲಾಗಿದೆ.

ಪಿ.ಆರ್.132 ಸಹಕಾರ ಸಂಘಗಳ ಅಪರ ನಿಬಂಧಕರು, (ಕೈಗಾರಿಕೆ ಮತ್ತು ಇತರೆ).

**IN THE COURT OF THE ADDITIONAL REGISTRAR OF CO-OP SOCIETIES (Ind & Misc) OFFICE OF THE REGISTRAR OF CO-OPERATIVE SOCIETIES, No.1, ALI ASKER ROAD, BANGALORE.**

**Dispute No. A(I/M)Dis/D2/1211/2004-2005**

**Petitioner :** General Manager, Mahalakshmi Co-operative Bank Ltd., Administrative Office, 1st Floor, Shivakrupa Building, Maruthi Veethike, Udupi-576101.

**V/s**

**Respondents :** 1) Chief Executive Cauvery urban Co-operative Bank Ltd., No. 1259/691, 13th cross, 2nd Stage, Girinagar, Bangalore-85.

**NOTICE OF ATTACHMENT OF MOVABLE PROPERTIES UNDER SECTION 103 OF THE KARNATAKA CO-OPERATIVE SOCIETIES ACT, 1959**

1. Whereas, the Petitioner bank has filed the above dispute before me under Section 70 of The Karnataka Co-op Societies Act, 1959 for recovery of a sum of Rs. 79,20,000=00 along with future interest at 18% from the Respondents. The dispute is taken on file under Dispute No.A(I/M) Dis/D2/1211/2004-2005.
2. Whereas it is brought to my notice by the Petitioner bank by an application filed under section 103 of the Karnataka Co-operative Societies Act, 1959 that the Reserve Bank of India has cancelled the licence issued to the respondent bank under B.R. Act. Hence, the petitioner prayed this court to attach the fixed deposit to the tune of Rs. 30,00,000=00 vide receipt No. 358 dated 25.09.2001 belonging to the respondent bank lying with the Karnataka State Co-operative Apex Bank Ltd., and the application was considered and a notice of conditional attachment was issued on 11.10.2004.
3. Whereas the Petitioner bank has filed one more additional application under section 103 of KCS Act 1959 along with affidavit on 18.12.2004, that his claim is to the tune of Rs. 60,00,000=00 along with interest, since the administrator has deposited another 20,00,000=00 in the Karnataka State Co-operative Apex Bank, he requested to attach the additional fixed deposit made by the administrator and further stated that if the Respondents are not prevented from withdrawing the amount the petitioner bank will be left with no means to recover the amount even if any award/ decree is obtained against the Respondents.
4. Whereas, I am fully convinced that the withdrawal of the Fixed deposits of the Respondent would defeat or delay the enforcement or execution of any order/decree that may be passed against the Respondent.
5. Hence, I pass the following order.

**ORDER**

Under the circumstances explained above and in exercise of Powers yested in me under Section 103 of the Karnataka Co-operative Societies Act, 1959, as conferred by the Government Notification No. CMW/169/CLM/2001, dated: 21.11.2001, I. B. Nagaraja, Additional Registrar of Co-operative Societies, (Ind. & Misc)., Bangalore do hereby order the conditional attachment of the Fixed deposit of Rs. 20,00,000-00 (Rupees Twenty lakhs only) belonging to the respondent in addition to the amount attached by this court in its notice of conditional attachment dated 11.10.2004 before Judgement in the above case.

Notice is hereby given to the Respondent that if he desire to have the conditional attachment raised, he should furnish cash security to the extent of Rs. 79.20 lakhs by depositing the said amount in the petitioner Co-operative Bank in the name of the Additional Registrar of Co-operative Societies (Ind & Misc)., Bangalore under Suspense Account and produce the original receipt/challan issued thereon to this office on or before 24.01.2005 without fail.

If they fail to furnish the cash security as ordered above within the stipulated period, this conditional attachment will be confirmed as made absolute.

Notice is also hereby given to persons interested in the fixed deposit that they will do so subject to this Attachment.

Given under my hand and seal this the 18th day of December 2004.

PR-134 Additional Registrar of C.S., (Indl. and Misc).

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರವರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಸಂ: ಕಾಅತು:ಕಾಪಕಾ:ಸಿಆರ್-100:2004 ದಿನಾಂಕ: 30ನೇ ನವೆಂಬರ್ 2004**

**ಅರ್ಜಿದಾರರು :**

1. ನರಸಮ್ಮ W/o ಲೇಟ್ ಹನುಮಂತ ರಾಯಪ್ಪಾ ವಯಸ್ಸು ಸುಮಾರು 42 ವರ್ಷ
2. ಲಕ್ಷ್ಮಮ್ಮ W/o ಲೇಟ್ ಹನುಮಂತರಾಯಪ್ಪ ವಯಸ್ಸು, ಸುಮಾರು 35 ವರ್ಷ
3. ಸಿದ್ದಮ್ಮ W/o ಲೇಟ್ ಚಿಕ್ಕವೀರಪ್ಪ ವಯಸ್ಸು 64 ವರ್ಷ ವಾಸ: ಕೆಸ್ತೂರು ಗ್ರಾಮ ಕೋರಾ ಹೋಬಳಿ ತುಮಕೂರು ತಾ:

ವಿರುದ್ಧ

**ಪ್ರತಿವಾದಿಗಳು:**

1. ಶೋಭಾ W/o ಲೇಟ್ ಬಸವರಾಜ್ R/o ಹೌಸಿಂಗ್ ಬೋರ್ಡ್ ಕಾಲನಿ ಶಿರಾಗೇಟ್ ತುಮಕೂರು ಟೌನ್
2. ದಿ ಬ್ರ್ಯಾಂಚ್ ಮ್ಯಾನೇಜರ್ ನ್ಯಾಷನಲ್ ಇನ್‌ಶ್ಯೂರೆನ್ಸ್ ಕಂ.ಲಿ. ಶಿರಾಣಿ ರೋಡ್ ತುಮಕೂರು.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ನರಸಮ್ಮ W/o ಲೇಟ್ ಹನುಮಂತರಾಯಪ್ಪ ಇವರು ತಮ್ಮ ಯಜಮಾನರಾದ ಹನುಮಂತರಾಯಪ್ಪ ಇವರು ಪ್ರತಿವಾದಿ 1 ಇವರ ಲಾರಿ ಸಂ: 5848 ರಲ್ಲಿ ಲೋಡರ್ - ಅನ್‌ಲೋಡರ್ ಆಗಿ ಕಾರ್ಯನಿರ್ವಹಿಸುತ್ತಿದ್ದು, ದಿನಾಂಕ: 14.09.2001 ರಂದು ಉದ್ಯೋಗ ಸಮಯದಲ್ಲಿ ಹೃದಯಾಘಾತವಾಗಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲಿ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ,
ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್.170

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಸಂ: ಕಾಅತು:ಕಾಪಕಾ:ಸಿಆರ್-104:2004 ದಿನಾಂಕ: 4ನೇ ಜನವರಿ 2005**

**ಅರ್ಜಿದಾರರು :**

1. ಭೈರಪ್ಪಾ S/o ಸಿದ್ದಪ್ಪಾ 50 ವರ್ಷ
2. ಮರುಳಮ್ಮ @ ಮರಳುಸಿದ್ದಮ್ಮ W/o ಬೈರಪ್ಪ 45 ವರ್ಷ ವಿಳಾಸ: ಬೊಮ್ಮಲಾಪುರ ಗ್ರಾಮ ಕಸಬಾ ಹೋಬಳಿ ತಿಪಟೂರು ತಾ: ತುಮಕೂರು ಜಿಲ್ಲೆ.

ವಿರುದ್ಧ

**ಪ್ರತಿವಾದಿಗಳು:**

1. ಕೆ. ಎನ್. ಚಂದ್ರಕಾಂತ S/o ಕೆ. ನಾಗಣ್ಣ ಜೈನ್ ಟೆಂಪಲ್ ರೋಡ್ ಚಿಕ್‌ಪೇಟ್ ತುಮಕೂರು.
2. ದಿ ನ್ಯಾಷನಲ್ ಇನ್ಸಶ್ಯೂರೆನ್ಸ್ ಕಂ.ಲಿ., ಬ್ರ್ಯಾಂಚ್ ಆಫೀಸ್ ಆಪೋಸಿಟ್ to KSRTC ಬಸ್‌ಸ್ಟ್ಯಾಂಡ್ ಹಿಂದೂಪುರ.

**ಪ್ರಕಟಣೆ**

ಅರ್ಜಿದಾರರಾದ ಶ್ರೀ: ಬೈರಪ್ಪಾ ಇವರು ತಮ್ಮ ಮಗನಾದ ಸಿದ್ದರಾಜು ಇವರು ಪ್ರತಿವಾದಿ ಕೆ. ಎನ್. ಚಂದ್ರಕಾಂತ್ ಇವರ Maxi cab Reg No: KA -17-A-7474 ರಲ್ಲಿ ಚಾಲಕನಾಗಿ ಕಾರ್ಯನಿರ್ವಹಿಸುತ್ತಿದ್ದು, ದಿನಾಂಕ: 31.5.2004 ರಂದು ಉದ್ಯೋಗ ಸಮಯದಲ್ಲಿ ಐಮಂಗಲ NH-17-ರಲ್ಲಿ ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ,
ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್.171

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಸಂ: ಕಾಅತು:ಕಾಪಕಾ:ಸಿಆರ್-113:2004 ದಿನಾಂಕ: 3ನೇ ಜನವರಿ 2005**

**ಅರ್ಜಿದಾರರು :**

1. ಎಂ. ಪಿ. ರಾಜು S/o ಪೆರುಮಾಳ್
2. ಲಕ್ಷ್ಮಿ W/o ರಾಜು R/o ಡಿ. ಹೊಸಹಳ್ಳಿ ಮಾರುತಿನಗರ, Ammasandra ತುಮಕೂರು ತಾಲ್ಲೂಕು.

ವಿರುದ್ಧ

**ಪ್ರತಿವಾದಿಗಳು:**

1. ಶ್ರೀಮತಿ ರಾಜೇಶ್ವರಿ W/o ಜಯರಾಮನಾಯ್ಡು ನಂ. 132, 20ನೇ ಮೇನ್ ರೋಡ್ I.S.T.R. ಬ್ಲಾಕ್, ರಾಜಾಜಿನಗರ ಬೆಂಗಳೂರು
2. ದಿ ಓರಿಯಂಟಲ್ ಇನ್ಸಶ್ಯೂರೆನ್ಸ್ ಕಂ.ಲಿ., I.M.L. ಬಿಲ್ಡಿಂಗ್, ನಂ. 221 ಕಬ್ಬನ್‌ಪೇಟ್ ರೋಡ್ ಬೆಂಗಳೂರು.

**ಪ್ರಕಟಣೆ**

ಅರ್ಜಿದಾರರಾದ ಶ್ರೀ: (1) ಎಂ. ಪಿ. ರಾಜು (2) ಶ್ರೀಮತಿ ಲಕ್ಷ್ಮಿ ಇವರು ತಮ್ಮ ಮಗನಾದ ನಾಗರಾಜು ಇವರು ಪ್ರತಿವಾದಿ ಶ್ರೀಮತಿ ರಾಜೇಶ್ವರಿ ಇವರ ಲಾರಿ KA-02-AA-1215 ರಲ್ಲಿ ಕ್ಲೀನರ್ ಆಗಿ ಕಾರ್ಯನಿರ್ವಹಿಸುತ್ತಿದ್ದು, ದಿನಾಂಕ: 30.11.2004 ರಂದು ಉದ್ಯೋಗ ಸಮಯದಲ್ಲಿ 10.15 ಗಂಟೆಗೆ ಎಸ್.ಟಿಟಿ. ಯಾರ್ಡ್ ರೋಡ್, ನಂ. 8.ಸಿ W.C. ಶೆಡ್ ಹತ್ತಿರ ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ,
ಪಿ.ಆರ್.172 ತುಮಕೂರು ಜಿಲ್ಲೆ, ತುಮಕೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಸಂ: ಕಾಅತು:ಕಾಪಕಾ:ಸಿಆರ್-114:2004 ದಿನಾಂಕ: 3ನೇ ಜನವರಿ 2005**

| **ಅರ್ಜಿದಾರರು :** | ವಿರುದ್ಧ | **ಪ್ರತಿವಾದಿಗಳು:** |
|---|---|---|
| 1. ಜಹೀದಾಬಾನು 2. ಮನ್ಸೂರ್ ಅಹಮದ್ | | 1. ಸಯ್ಯದ್ ಪಾಚ S/o ಸಯ್ಯದ್ ಕರೀಂಸಾಬ್ ಜೈಪುರ ಮುಖ್ಯರಸ್ತೆ, |
| 3. ನೂರ್ ಆಯಿಷ್ 4. ಸಬಿಯಾ ಬಾನು | | ತಿಲಕ್‌ಪಾರ್ಕ್ ಪೊಲೀಸ್ ಸ್ಟೇಷನ್ ಹತ್ತಿರ ತುಮಕೂರು. |
| 5. ನಿಹಾ ಅಂಜುಂ 6. ರೆಹನಾ ಅಹಮದ್ | | 2. ನ್ಯಾಷನಲ್ ಇನ್ಸೂರೆನ್ಸ್ ಕಂ.ಲಿ., |
| 7.ಜಮೀರ್ ಅಹಮದ್ | | ಶ್ರೀ ರಾಮ್‌ಸ್ಟೈಟ್ ಆಫೀಸ್, 2ಎ. ಪ್ರಕಾಶಮ್ ರಸ್ತೆ, |
| R/o ಪಿ.ಜಿ. ಲೇಔಟ್, ತುಮಕೂರು | | ಟಿ. ನಗರ, ಚೆನ್ನೈ-600017 |

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ: ಜಹೀದಾಬಾನು ಇವರು ತಮ್ಮ ಯಜಮಾನರಾದ ರಫೀಕ್ ಅಹಮದ್ ಇವರು ಪ್ರತಿವಾದಿ ಸಯ್ಯದ್ ಪಾಚ ಇವರ ಲಾರಿ KA-37-8595 ರಲ್ಲಿ ಡ್ರೈವರ್ ಆಗಿ ಕಾರ್ಯನಿರ್ವಹಿಸುತ್ತಿದ್ದು, ದಿನಾಂಕ: 14.12.2004 ರಂದು ಉದ್ಯೋಗ ಸಮಯದಲ್ಲಿ ರಿಂಗ್ ರಸ್ತೆ, ಜೈಪುರ, ತುಮಕೂರಿನಲ್ಲಿ ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ,
ಪಿ.ಆರ್.173 ತುಮಕೂರು ಜಿಲ್ಲೆ, ತುಮಕೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಸಂ: ಕಾಅತು:ಕಾಪಕಾ:ಸಿಆರ್-116:2004 ದಿನಾಂಕ: 3ನೇ ಜನವರಿ 2005**

| **ಅರ್ಜಿದಾರರು :** | ವಿರುದ್ಧ | **ಪ್ರತಿವಾದಿಗಳು:** |
|---|---|---|
| 1. ಶ್ರೀಮತಿ ವನಜಾಕ್ಷಿ 2. ವೆಂಕಟೇಶ್ 3. ಸತೀಶ್ | | 1. ಎಸ್. ಜಗದೀಶ್ S/o ಜಿ. ಶ್ರೀನಿವಾಸಲು ಹುಲಿಗೆರೆಹಳ್ಳಿ, |
| 4. ಮೂಡಲಗಿರಿಯಪ್ಪ 5. ಮುದ್ದಕ್ಕ | | ಮದಲೂರು ಪೋಸ್ಟ್ ಸಿರಾ ತಾಲ್ಲೂಕು. |
| ಆಲದಹಳ್ಳಿ, ಅಮರಾಪುರ ಮಂಡಲ ಮಡಕಶಿರ ತಾ. | | 2. ದಿ ನ್ಯಾಷನಲ್ ಇನ್ಸೂರೆನ್ಸ್ ಕಂ. ಲಿ., ಹಿಂದೂಪುರ, ಆರ್.ಟಿ.ಸಿ. |
| ಅನಂತಪುರ ಜಿಲ್ಲೆ D. P. | | ಬಸ್‌ಸ್ಟಾಂಡ್ ಅನಂತಪುರ ಜಿಲ್ಲೆ, D. P. State |

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ: ವನಜಾಕ್ಷಿ ಇವರು ತಮ್ಮ ಯಜಮಾನರಾದ ಆನಂದಪ್ಪ @ ಆನಂದಕುಮಾರ ಇವರು ಪ್ರತಿವಾದಿ ಎಸ್. ಜಗದೀಶ್ ಇವರ ಬಾಲಾಜಿ ಟ್ರಾನ್ಸ್ ಪೋರ್ಟ್ ಬಸ್‌ನಲ್ಲಿ (KA-17-8968) ಕ್ಲೀನರ್ ಕಾರ್ಯನಿರ್ವಹಿಸುತ್ತಿದ್ದು, ದಿನಾಂಕ: 28.10.2004 ರಂದು ಉದ್ಯೋಗ ಸಮಯದಲ್ಲಿ 7.40 ರಲ್ಲಿ ಆಲದಮರದ ಹತ್ತಿರ ಜ್ಯೋತಿನಗರ, ಶಿರಾ-ಅಮರಾಪುರ ರಸ್ತೆಯಲ್ಲಿ ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಪಿ.ಆರ್.174 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಸಂ: ಕಾಅತು:ಕಾಪಕಾ:ಸಿಆರ್-117:2004 ದಿನಾಂಕ: 3ನೇ ಜನವರಿ 2005**

**ಅರ್ಜಿದಾರರು :**
1. ಶ್ರೀಮತಿ ಕವಿತ W/o ಲೇಟ್ ಬಾಬು @ ವಿ. ಎಸ್. ಬಾಬು
2. ಕು: ವರ್ಷಿನಿ
   ನಂ. 742, ವೆಂಕಟರಾಮ್ ಬಿಲ್ಡಿಂಗ್, ಅಂಜನೇಯ ಟೆಂಪಲ್ ಹತ್ತಿರ ಮಾರುತಿ ಲೇಔಟ್ ಚೊಕ್ಕಸಂದ್ರ, ಟಿ. ದಾಸರಹಳ್ಳಿ ಬೆಂಗಳೂರು-560 057

**ವಿರುದ್ಧ**

**ಪ್ರತಿವಾದಿಗಳು:**
1. ಮ್ಯಾನೇಜರ್ M/s ದಿ ಸದರನ್ ಗ್ಯಾಸ್ ಲಿಮಿಟೆಡ್ ಪ್ಲಾಟ್ ನಂ. 10-ಆರ್. ಪೀಣ್ಯ ಇಂಡಸ್ಟ್ರಿಯಲ್ ಏರಿಯಾ, 2ನೇ ಫೇಸ್, ಬೆಂಗಳೂರು
2. ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ. ಲಿ., ಸಿಟಿಬ್ರಾಂಚ್ ಮಾರ್ಗೋ, ಗೊಸಲ್ಲಾ ಬಿಲ್ಡಿಂಗ್, 2ನೇ ಫ್ಲೋರ್, ಸಾಸೈಟ್, ಗೋವ-403601

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ: ಕವಿತ ಇವರು ತಮ್ಮ ಯಜಮಾನರಾದ ಬಾಬು @ ವಿ. ಎಸ್. ಬಾಬು ಇವರು ಪ್ರತಿವಾದಿ ದಿ ಸದರನ್ ಗ್ಯಾಸ್ ಲಿಮಿಟೆಡ್ ಇವರ ಗ್ಯಾಸ್ ಟ್ಯಾಂಕರ್ ನಂ. KA-02-B-6238ರಲ್ಲಿ ಡ್ರೈವರ್ ಕಾರ್ಯ ನಿರ್ವಹಿಸುತ್ತಿದ್ದು, ದಿನಾಂಕ: 3.9.2004 ರಂದು ಉದ್ಯೋಗ ಸಮಯದಲ್ಲಿ ಪಾಂಡಿಚೇರಿ ಹತ್ತಿರ ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ,
ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್.175

**IN THE COURT OF COMMISSIONER FOR WORKMEN'S COMPENSATION, BIDAR.**
**No. LOB/WCA/Cr-3/2005**

**Applicants:**
1. Gopamma W/o Manik
   Age 37 years Occ: Coolie
   R/o H. No. 17-4,229 Maheshnagar, Mannahalli Road, Bidar & Others.

**V/s**

**Respondents:**
1. S. Amarnath S/o S. Chandrashekharappa 30 years Occ: Business R/o Vasanthanagar Colony, Kulhatpalli, Balnagar, Rangareddy Dist.
2. New India Assurance Co. Ltd., Hyderabad.

**PROCLAMATION**

Sri/Smt. Gopamma M/o S. Nagnath R/o Mannahalli Road Bidar have/has filed application in this court claiming compensation stating that late S. Nagnath was working as Cleaner under the Respondent No. I he met with an accident arising out of and during the course of employment as a result he died on 29.1.2004

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclamation, if no applications or objections are received within the specified date the court will proceeded further in the matter.

Commissioner For Workmen's
Compensation, Bidar.

PR-153

**IN THE COURT OF COMMISSIONER FOR WORKMEN'S COMPENSATION, BIDAR.**
**No. LOB/WCA/Cr-4/2005**

**Applicants:**
1. Babu Rao @ Suryakanth
   S/o Gangaram Sukne, Age 38 years
   R/o Sukni Now at Halbarga Tq. Bhalki Dist Bidar & 4 others.

**V/s**

**Respondents:**
1. M/s Sharna Transport, Corporation, Gosta Mahal, Hyderabad (A.P)
2. National Insurance Co. Ltd., Hyderabad. through D.M.N.I. Co. Ltd., Gulbarga.

**PROCLAMATION**

Sri/Smt. Babu Rao @ Suryakanth Wo/ F/o S/o Santosh @ Gopal R/o Sukni Now Halbarga Tq Bhalki Dist Bidar have/has filed application in this court claiming compensation stating that late Santosh @ Gopal was working as Driver under the Respondent No. I he met with an accident arising out of and during the course of employment as a result he died on 13.11.2003

Wherefore, it is hereby notified for the information of these concerned that other dependents if any may file their claim application and objections within 30 days from the date of publication of this

proclamation, if no applications or objections are received within the specified date the court will proceeded further in the matter.

Commissioner For Workmen's Compensation, Bidar.

PR-154

**IN THE COURT OF COMMISSIONER FOR WORKMEN'S COMPENSATION, BIDAR**
**No. LOB/WCA/Cr-5/2005**

**Applicants:** V/s

1. Kamala Bai W/o late Madhav phule Age 25 years Occ: Household, R/o Now at Kosam, Tq Bhalki Dist Bidar & 3 Others.

**Respondents:**

1. Parameshwar S/o Nagnath Phule Age: Major, Occ: Business, R/o Habatpur Tq Bhalki Dist Bidar.
2. National Insurance Co. Ltd., Latoor, through D.M. NIC Co. Ltd., Gulbarga.

**PROCLAMATION**

Sri/Smt. Kamala Bai W/o Madhav R/o Kosam Tq Bhalki Dist Bidar have/has filed application in this court claiming compensation stating that Late Madhav was working as Driver under the Respondent No. I he met with an accident arising out of and during the course of employment as a result he died on 25.11.2003

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclamation, if no applications or objections are received within the specified date the court will proceeded further in the matter.

Commissioner For Workmen's Compensation, Bidar.

PR-155

**PROCEEDINGS OF THE ASST REGISTRAR OF CO-OPERATIVE SOCIETIES**
**IInd CIRCLE, CHAMARAJAPET, BANGALORE-560 018.**
**No. ARB II (45) Sale Confirmation/6/ 2004-05 Bangalore dated: 17th September 2004**

**Subject :** Regarding Sale Confirmation of Immovable Property of Smt. B. Sujatha and Sri R. Thangappa, No. 3, House list Khata No. 725, Property No. 255, Byappana Halli Village, K.R. Puram, Bangalore-33, relating to CEP No. 74/2004-05 in favour of Sri R. G. SARAVANAN, No. 94/4, Old Byappana Halli Village, M. S. Nagar Main Road, K. R. Puram, Bangalore-33.

**Reference:** Letter No. S.O/C.E.P. No. 74/2004-05 dated: 16.07.2004 of the Sale Officer attached to the Asst Registrar of Co-op Societies, IInd Circle, Bangalore-18.

**Preamble:**

Smt. B. SUJATHA, wife of Sri R. Thangappa and Sri R. THANGAPPA, son of late Sri Rammanna, both residing at No. 3 Old Byappana halli Main Road, M.S. Nagar Post, Bangalore-33 have borrowed loan from the Bhavasara Kshatriya Co-op., Bank Ltd., Bangalore, by mortgaged Immovable Property bearing No. 3 House list Khata No. 725, Property No. 255, Byappana Halli Village, K. R. Puram, Bangalore-33, and the Judgement debtor Smt. B. SUJATHA and R. THANGAPPA, have failed to repay the loan amount to the Petitioner Bank in time, consequent of which a decree bearing No. JRB/DIS/113/2002-03 dated 30.05.2003 for Rs. 5,02,500-00 and as on 17.07.2004 plus further interest at the rate of 17% and over due interest at the rate of 5% and other cost obtained against Smt. B. SUJATHA and Sri R. THANGAPPA in this connection execution petition was filed for execution of decree against the immovable property mortgaged by Smt. B. SUJATHA and Sri R. THANGAPPA, both residing at No. 3, Old Byappana Halli Main Road, M.S. Nagar Post, Bangalore-33, was brought for Sale and Public Auction on 16.07.2004 by the Sale Officer attached to the Asst. Registrar of Co-Op., Societies, IInd Circle, Bangalore-18 and immovable property was sold in Public Auction for Rs. 4,03,000-00 in favour of Sri R. G.SARAVANAN, son of Sri M. Rajagopal, No. 94/4, situated at Old Byappana Halli Village, M.S. Nagar Main Road, K.R.Puram, Bangalore-33, Since he was the highest bidder in the Public Auction conducted on 16.7.2004.

From the perusal of the records of the Sale Officer attached to the Asst. Registrar of Co-operative Societies, IInd Circle, Bangalore-18, submitted to this office. It is seen that the Sale Officer followed the Sale procedure laid under rule 38 (2) (d) of Karnataka Co-operative Societies Rules 1960 in view of the proceedings of the Sale Officer verifying and going through the records, the following order is therefore passed.

**ORDER**

In exercise of Powers vested under rule 38 (6) (a) of the Karnataka Co-op., Societies Rules 1960, the sale of the mortgaged property bearing No. 3., House list Khata No. 725, Property No. 255, Byappana Halli Village, K. R. Puram, Bangalore-33, by the Sale Officer attached to the Asst. Registrar of Co-Operative Societies, IInd Circle, Bangalore-18, in public auction conducted on 16.07.2004 of the property detailed in the Schedule.

**SCHEDULE OF THE PROPERTY**

Property bearing No. 3., House list Khata No. 725, Property No. 255, Byappana Halli Village, K. R. Puram, Bangalore-33,

**BOUNDARIES**

| | | |
|---|---|---|
| East by | : | Road |
| West by | : | Site No. 8 |
| North by | : | Site No. 2 |
| South by | : | Remaining portion of the Same property belongs to the vendor. |
| East to West | : | 30 Feet |
| North to South | : | 20 Feet |

In execution of C.E.P. No. 74/2004-2005 the above said property is therefore confirmed in favour of Sri R. G. SARAVANAN, Son of Sri M. Rajagopal, No. 94/4, situated at Old Byappana Halli Village, M. S. Nagar Main Road, K. R. Puram, Bangalore-33, Rs. 4, 03,000-oo (Rupees four lakh three thousand only) since he was the highest bidder in the Public Auction Sale conducted on 16-07-2004.

Given under my hand and seal on this 17th day of September 2004.

Asst. Registrar
PR-208 of Co-op Societies, IInd Circle, Bangalore-18.

**PROCEEDINGS OF THE ASST REGISTRAR OF CO-OPERATIVE SOCIETIES**
**IInd CIRCLE, CHAMARAJAPET, BANGALORE-560 018.**

**No. ARB II (45) Sale Confirmation/17/ 2004-05 Bangalore dated: 19th October 2004**

**Subject :** Regarding Sale Confirmation of Immovable Property of Sri. R.N. Kumar, Smt. VASANTHA KUMAR, No. 28, Old No. 42/1, G. No. 16th Street, Ulsoor, Bangalore-560 008, relating to CEP No. 2081/2003-04 in favour of Sri V. P. MUNISWAMAIAH, No. 41, situated at Shamanna Gowda Layout, Om Shakthi Temple Street, 4th Main, 3rd Cross, Ulsoor, Bangalore-560 008.

**Reference:** Letter No. S.O/C.E.P. No.2081/2003-04 dated 05.08.2003 of the Sale Officer attached to the Asst. Registrar of Co-op Societies, IInd Circle, Bangalore-18.

**Preamble:**

Sri. R. N. KUMAR, son of late Sri C. P. Raju, and Smt. VASANTHA KUMAR, wife of Sri R. N. Kumar, both residing at No. 28, Old No. 42/1, situated at G. No. 16th Street, Jougu Palya, Ulsoor, Bangalore-560 008, have borrowed loan from the Bhavasara Kshatriya Co-Op., Bank Ltd., Bangalore by mortgaged Immovable Property bearing No. 28, Old No. 42/1, situated at G. No. 16th Street, Jougu Palya, Ulsoor, Bangalore- 560 008, and the Judgement debtor Sri R.N. Kumar and Smt. VASANTHA KUMAR, have failed to repay the loan amount to the Petitioner Bank in time, consequent of which a decree bearing No.JRB/DIS/6031/2000-2001 dated 22.06.2002 for Rs. 6,37,030-00 and as on 21.12.2001 plus further interest at the rate of 17% and over due interest at the rate of 5% and other cost obtained against Sri R.N. KUMAR and Smt. VASANTHA KUMAR in this connection execution petition was filed for execution of decree against the immovable property mortgaged by Sri R.N. Kumar and Smt. Vasantha Kumar, both residing at No. 28, Old No. 42/1, situated at G. No. 16th Street, Jougu Palya, Ulsoor, Bangalore-560 008, was brought for Sale and Public Auction on 11-08-2004 by the Sale Officer attached to the Asst. Registrar of Co-Op., Societies, IInd Circle, Bangalore-18 and immovable property was sold in Public Auction for Rs. 8, 52,000-00 in favour of Sri V. P. MUNISWAMAIAH, son of late Sri Pillappa, residing at No. 41, situated at Shamanna Gowda Layout, Om Shakthi Temple Street, 4th Main, 3rd Cross, Ulsoor, Bangalore-560 008, since he was the highest bidder in the Public Auction conducted on 11.08.2004.

From the perusal of the records of the Sale Officer attached to the Asst. Registrar of Co-operative Societies, IInd Circle, Bangalore-18, submitted to this office. It is seen that the Sale Officer followed the Sale procedure laid under rule 38 (2) (d) of Karnataka Co-operative Societies Rules 1960 in view of the proceedings of the Sale Officer verifying and going through the records, the following order is therefore passed.

**ORDER**

In exercise of Powers vested under rule 38 (6) (a) of the Karnataka Co-op., Societies Rules 1960, the sale of the mortgaged property bearing No. 28, Old No.42/1, Situated at G. No. 16th Street, Jougu Palya, Ulsoor, Bangalore-560 008, by the Sale Officer attached to the Asst. Registrar of Co-Operative Societies, IInd Circle, Bangalore-18, in public auction conducted on 11.08.2004 of the property detailed in the Schedule.

**SCHEDULE OF THE PROPERTY**

Property bearing No. 28., Old No.42/1, situated at G. No. 16th Street, Jougu Palya, Ulsoor, Bangalore-560 008.

**BOUNDARIES**

| | | |
|---|---|---|
| East by | : | Property No. 42/2 |
| West by | : | Property No. 42 belonging to Smt. Ulluramma |
| North by | : | Lane and vacated land |
| South by | : | Hanuman Singh's Property |
| East to West | : | 18 Feet |
| North to South | : | 31 Feet |

In execution of C.E.P. No. 2081/ 2003-2004 the above said property is therefore confirmed in favour of Sri V.P. MUNISWAMAIAH, son of late Sri Pillappa, residing at No. 41, situated at Shamanna Gowda Layout, Om Shakthi Temple Street, 4th Main, 3rd Cross, Ulsoor, Bangalore-560 008, for Rs. 8,52,000-00 (Rupees eight lakh fifty two thousand only) since he was the highest bidder in the Public Auction Sale conducted on 11.08.2004.

Given under my hand and seal on this 19th day of October 2004.

Asst. Registrar
of Co-op Societies, IInd Circle, Bangalore-18.

PR-209

**ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ, ಕೋಲಾರ ರವರ ನಡುವಳಿಗಳು**

**ವಿಷಯ :** ಕೋಲಾರ ತಾಲ್ಲೂಕು ಹೋಳೂರು ಹೋಬಳಿ ಅಣ್ಣೆಹಳ್ಳಿ ಗ್ರಾಮದ ಸ.ನಂ. 21/5 ರಲ್ಲಿ 0.04 ಗುಂಟೆ ಜಮೀನನ್ನು ಅಣ್ಣೆಹಳ್ಳಿಯಿಂದ ಚಲ್ಲಪ್ಪಲ್ಲಿ ಗ್ರಾಮಕ್ಕೆ ಸಂಪರ್ಕ ರಸ್ತೆ ನಿರ್ಮಾಣದ ಅಂಗವಾಗಿ ಭೂ ಸ್ವಾಧೀನ ಪಡಿಸಿಕೊಳ್ಳುವ ಬಗ್ಗೆ.

**ಉಲ್ಲೇಖ :**
1. ಕಾರ್ಯಪಾಲಕ ಅಭಿಯಂತರರು ಜಿಲ್ಲಾ ಪಂಚಾಯತ್ ತಾಂತ್ರಿಕ ವಿಭಾಗ ಕೋಲಾರ ರವರ ಪತ್ರ ನಂ. ಕಾಪಾಅ: ಜಿಪಂತಾಂವಿ:ಕೋಕಿಅ:3:246:2004-05 ದಿನಾಂಕ: 17.05.2004.
2. ಸಹಾಯಕ ಕಮೀಷನರ್ ಕೋಲಾರ ಉಪ ವಿಭಾಗ ಕೋಲಾರ ರವರ ಪತ್ರ ನಂ. ಎಲ್ಎಕ್ಯೂ-ಎಸ್ಆರ್ 2/2004-05 ದಿನಾಂಕ: 28.12.2004.

**ಪ್ರಸ್ತಾವನೆ:**

ಕೋಲಾರ ತಾಲ್ಲೂಕು ಹೋಳೂರು ಹೋಬಳಿ ಅಣ್ಣೆಹಳ್ಳಿ ಗ್ರಾಮದ ಸ.ನಂ. 21/5ರಲ್ಲಿ 0.04 ಗುಂಟೆ ಜಮೀನನ್ನು ಅಣ್ಣೆಹಳ್ಳಿಯಿಂದ ಚಲ್ಲಪ್ಪಲ್ಲಿ ಗ್ರಾಮಕ್ಕೆ ಸಂಪರ್ಕ ರಸ್ತೆ ನಿರ್ಮಾಣಕ್ಕಾಗಿ ಭೂ ಸ್ವಾಧೀನಪಡಿಸಿಕೊಳ್ಳುವ ಬಗ್ಗೆ ಕಾರ್ಯಪಾಲಕ ಅಭಿಯಂತರರು ಜಿಲ್ಲಾ ಪಂಚಾಯತ್ ತಾಂತ್ರಿಕ ವಿಭಾಗ ಕೋಲಾರ ರವರು ಉಲ್ಲೇಖ (1)ರ ಪತ್ರದ ಅನ್ವಯ ದಾಖಲೆಗಳೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಕಾರ್ಯಪಾಲಕ ಅಭಿಯಂತರರು ಸಲ್ಲಿಸಿದ ಪ್ರಸ್ತಾವನೆಯ ಅನ್ವಯ ಪರಿಶೀಲಿಸಿ ಕಡತದೊಟ್ಟಿಗೆ ವರದಿ ಹಾಗೂ ಭೂ ಸ್ವಾಧೀನ ಕಾಯ್ದೆಯ ಕಲಂ 4(1)ರ ಕರಡು ಅಧಿಸೂಚನೆಯನ್ನು ಸಲ್ಲಿಸಲು ಸಹಾಯಕ ಕಮೀಷನರ್ ಕೋಲಾರ ಉಪ ವಿಭಾಗ ಕೋಲಾರ ರವರಿಗೆ ನಿರ್ದೇಶನ ನೀಡಿದ್ದರ ಮೇರೆಗೆ ಸದರಿಯವರು ಕಡತದೊಟ್ಟಿಗೆ ವರದಿ ಹಾಗೂ 4(1)ರ ಪ್ರಾರಂಭಿಕ ಅಧಿಸೂಚನೆಯನ್ನು ಉಲ್ಲೇಖ (2) ಪತ್ರದ ಅನ್ವಯ ಅನುಮೋದನೆಗಾಗಿ ಸಲ್ಲಿಸಿರುತ್ತಾರೆ. ಸಹಾಯಕ ಕಮೀಷನರ್ ರವರು ತಮ್ಮ ವರದಿಯಲ್ಲಿ ಈ ಪ್ರಕರಣದಲ್ಲಿ ಭೂ ಸ್ವಾಧೀನದ ಪ್ರಸ್ತಾವನೆ ಒಂದು ಸಾರ್ವಜನಿಕ ಅನುಕೂಲಕ್ಕಾಗಿ ಭೂ ಸ್ವಾಧೀನಪಡಿಸಿಕೊಳ್ಳಬೇಕಾಗಿದ್ದು ಇದರ ಬಾಬ್ತು ಭೂ ಸ್ವಾಧೀನದ ಅಂದಾಜು ಮೊಬಲಗು ರೂ. 62,400/- (ರೂಪಾಯಿ ಅರವತ್ತೆರಡು ಸಾವಿರದ ನಾಲ್ಕು ನೂರು ಮಾತ್ರ)ವನ್ನು ಭೂ ಕೋರಿಕೆಯವರು ಠೇವಣಿಯಾಗಿಟ್ಟಿದ್ದಾರೆಂದು, ಆದ್ದರಿಂದ ಸಹಾಯಕ ಕಮೀಷನರ್ ಕೋಲಾರ ಉಪ ವಿಭಾಗ ರವರು ಭೂ ಸ್ವಾಧೀನ ಕಾಯ್ದೆ 1894 ರ ಕಲಂ 4(1)ರ ಅಧಿಸೂಚನೆಯನ್ನು ಹೊರಡಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

**ಆದೇಶ ಸಂಖ್ಯೆ: ಎಲ್ಎಕ್ಯೂ: ಎಸ್ಆರ್:5:2004-05 ದಿನಾಂಕ: 17ನೇ ಜನವರಿ 2005**

ಸಹಾಯಕ ಕಮೀಷನರ್ ಕೋಲಾರ ಉಪ ವಿಭಾಗ ರವರು ಸಲ್ಲಿಸಿರುವ ಪ್ರಸ್ತಾವನೆಯ ಮೇರೆಗೆ ಕೋಲಾರ ತಾಲ್ಲೂಕು ಹೋಳೂರು ಹೋಬಳಿ ಅಣ್ಣೆಹಳ್ಳಿ ಗ್ರಾಮದ ಸ.ನಂ. 21/5 ರಲ್ಲಿ 0.04 ಗುಂಟೆ ಜಮೀನನ್ನು ಅಣ್ಣೆಹಳ್ಳಿಯಿಂದ ಚಿಲ್ಲಪ್ಪಲ್ಲಿ ಗ್ರಾಮಕ್ಕೆ ರಸ್ತೆ ಸಂಪರ್ಕ ಕಲ್ಪಿಸುವ ಉದ್ದೇಶಕ್ಕಾಗಿ ಅವಶ್ಯಕವಿರುತ್ತದೆಂದು ಕಂಡು ಬಂದಿರುತ್ತದೆ. ಆದ್ದರಿಂದ 1894ರ ಭೂ ಸ್ವಾಧೀನ ಕಾಯ್ದೆಯ ಕಲಂ 4(1)ರ ಅಧಿಸೂಚನೆಯನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲು ಸಂಕಲನಕಾರರು, ಕರ್ನಾಟಕ ರಾಜ್ಯಪತ್ರ, ಬೆಂಗಳೂರು ರವರಿಗೆ ಕಳುಹಿಸಲು ಆದೇಶಿಸಿದೆ. ಈ ಅಧಿಸೂಚನೆಯನ್ನು ನಿಯಮಾನುಸಾರ ದಿನ ಪತ್ರಿಕೆಗಳಲ್ಲಿ ಹಾಗೂ ಸ್ಥಳೀಯವಾಗಿ ಪ್ರಕಟಿಸಲು ಸಹಾಯಕ ಕಮೀಷನರ್ ಕೋಲಾರ ಉಪ ವಿಭಾಗ ರವರಿಗೆ ನಿರ್ದೇಶಿಸಿದೆ.

ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ, ಕೋಲಾರ.

**ಜಿಲ್ಲಾಧಿಕಾರಿಗಳವರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ**

**ಭೂ ಅರ್ಜನೆ ಅಧಿನಿಯಮದ 4(1)ನೇ ಪ್ರಕರಣದ ಮೇರೆಗೆ ಅಧಿಸೂಚನೆ**

**ಕ್ರಮಾಂಕ: ಎಲ್ಎಕ್ಯೂ:ಎಸ್ಆರ್:5/04-05 ದಿನಾಂಕ: 17ನೇ ಜನವರಿ 2005**

ಇದರ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಭೂಮಿಗಳು ಸಾರ್ವಜನಿಕ ಉದ್ದೇಶಕ್ಕಾಗಿ ಎಂದರೆ ಕೋಲಾರ ತಾಲ್ಲೂಕು ಹೋಳೂರು ಹೋಬಳಿ ಅಣ್ಣೆಹಳ್ಳಿಯಿಂದ ಚಲ್ಲಪಲ್ಲಿ ಗ್ರಾಮಕ್ಕೆ ಸಂಪರ್ಕ ರಸ್ತೆ ನಿರ್ಮಿಸಲು ಅಗತ್ಯವಾಗಲಿವೆಯೆಂದು ಕರ್ನಾಟಕ ಸರ್ಕಾರಕ್ಕೆ ಕಂಡು ಬಂದಿರುವುದರಿಂದ:

ಕರ್ನಾಟಕ ಅಧಿನಿಯಮದ 1991ರ 33ರ ಮೂಲಕ ತಿದ್ದುಪಡಿಯಾದ ಭೂ ಅರ್ಜನೆ ಅಧಿನಿಯಮ 1894 (ಕೇಂದ್ರ ಅಧಿನಿಯಮ ಸಂಖ್ಯೆ: 1894ರ 1)ರ 4ನೇ ಪ್ರಕರಣದ (1)ನೇ ಉಪ ಪ್ರಕರಣದ ಉಪಬಂಧಗಳ ಅನುಸಾರವಾಗಿ ಅದಕ್ಕೆ ಸಂಬಂಧಪಟ್ಟ ಎಲ್ಲರಿಗೂ ಆ ಬಗ್ಗೆ ಈ ಮೂಲಕ ನೋಟೀಸನ್ನು ಕೊಡಲಾಗಿದೆ ಹಾಗೂ ಕರ್ನಾಟಕ ಸರ್ಕಾರವು ಆ ಅಧಿನಿಯಮದ 4(2)ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಲು ವಿಶೇಷ ಭೂ ಅರ್ಜನೆ ಅಧಿಕಾರಿ ಮತ್ತು ಅವರ ಸಿಬ್ಬಂದಿ ಹಾಗೂ ಕೆಲಸಗಾರರಿಗೆ ಈ ಮೂಲಕ ಅಧಿಕಾರ ನೀಡಿರುತ್ತದೆ.

ಸದರಿ ಅಧಿನಿಯಮದ 3 (ಸಿ) ಪ್ರಕರಣದ ಮೇರೆಗೆ ಕರ್ನಾಟಕ ಸರ್ಕಾರವು ಅಧಿನಿಯಮದ 5-ಎ ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸಲು ಉಪ ವಿಭಾಗಾಧಿಕಾರಿಗಳು ಮತ್ತು ಭೂ ಸ್ವಾಧೀನಾಧಿಕಾರಿ, ಕೋಲಾರ ಉಪ ವಿಭಾಗ, ಕೋಲಾರ ಇವರನ್ನು ನೇಮಕ ಮಾಡಿದೆ.

ಭೂಮಿಗಳಲ್ಲಿ ಹಿತಾಸಕ್ತಿ ಹೊಂದಿರುವ ಯಾವನೇ ವ್ಯಕ್ತಿಯು ತನ್ನ ಆಕ್ಷೇಪಣೆಗಳು ಯಾವುದಾದರೂ ಇದ್ದರೆ, ಅವುಗಳನ್ನು ಈ ಅಧಿಸೂಚನೆ ಪ್ರಕಟವಾದ ಮೂವತ್ತು ದಿನಗಳೊಳಗಾಗಿ ಕರ್ನಾಟಕ ಅಧಿನಿಯಮ 1991ರ 33ರ ಮೂಲಕ ತಿದ್ದುಪಡಿಯಾದ ಭೂ ಅರ್ಜನೆ ಅಧಿನಿಯಮ 1894ರ 3(ಸಿ) ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸಲು ನೇಮಕವಾದ ಉಪವಿಭಾಗಾಧಿಕಾರಿಗಳು ಮತ್ತು ಭೂ ಸ್ವಾಧೀನಾಧಿಕಾರಿ, ಕೋಲಾರ ಉಪ ವಿಭಾಗ ಕೋಲಾರ ಇವರಿಗೆ ಲಿಖಿತದಲ್ಲಿ ಸಲ್ಲಿಸಬಹುದು.

ಸದರಿ ಅರ್ಜನೆ ಉದ್ದೇಶಕ್ಕಾಗಿ ಸದರಿ ಜಮೀನುಗಳ ಮೇಲೆ ನಿಯೋಜಿತರಾದ ಯಾವನೇ ಮೋಜಣಿದಾರ ಅಥವಾ ಇತರೆ ವ್ಯಕ್ತಿಗಳಿಗೆ ಅಡ್ಡಿಯನ್ನುಂಟು ಮಾಡಬಾರದೆಂದು ಅಥವಾ ಅವರ ಕಾರ್ಯದಲ್ಲಿ ಹಸ್ತಕ್ಷೇಪ ಮಾಡಬಾರದೆಂದು ಸದರಿ ಭೂಮಿಗಳಲ್ಲಿ ಹಿತಾಸಕ್ತಿ ಹೊಂದಿರುವ ಎಲ್ಲಾ ವ್ಯಕ್ತಿಗಳಿಗೆ ಈ ಮೂಲಕ ಎಚ್ಚರಿಕೆ ನೀಡಲಾಗಿದೆ. ಈ ಅಧಿಸೂಚನೆಯು ಪ್ರಕಟವಾದ ದಿನಾಂಕದ ನಂತರ ಜಿಲ್ಲಾಧಿಕಾರಿ, ಕೋಲಾರ ಜಿಲ್ಲೆ, ಕೋಲಾರ ಇವರ ಅನುಮತಿಯಿಲ್ಲದೆ ಮಾರಾಟ, ಗುತ್ತಿಗೆ, ಅಡಮಾನ ವಿನಿಮಯದ ಮೂಲಕ ಅಥವಾ ಬೇರೆ ರೀತಿಯ ಮೂಲಕ ಸದರಿ ಭೂಮಿಗಳ ವಿಲೇಗಾಗಿ ಮಾಡಿಕೊಂಡ ಯಾವುದೇ ಕರಾರುಗಳನ್ನು ಅಥವಾ ಅದರಲ್ಲಿ ಮಾಡಲಾದ ವೆಚ್ಚ ಅಥವಾ ಅಭಿವೃದ್ಧಿಗಳನ್ನು ಅಂತಿಮವಾಗಿ ಅರ್ಜನೆ ಮಾಡಿಕೊಳ್ಳಲಾಗುವ ಸದರಿ ಭೂಮಿಗಳ ಅಂತಹ ಭಾಗಗಳಿಗೆ ಪರಿಹಾರಕ್ಕಾಗಿ ನಿರ್ಧರಣೆ ಮಾಡುವ ಅಧಿಕಾರಿಯೂ ಸದರಿ ಅಧಿನಿಯಮದ (ಏಳನೇ ಖಂಡದ) 24ನೇ ಪ್ರಕರಣದ ಮೇರೆಗೆ ಗಣನೆಗೆ ತೆಗೆದುಕೊಳ್ಳಬಾರದು.

ಉಪ ವಿಭಾಗಾಧಿಕಾರಿಗಳು ಮತ್ತು ಭೂ ಸ್ವಾಧೀನಾಧಿಕಾರಿ, ಕೋಲಾರ ಉಪ ವಿಭಾಗ, ಕೋಲಾರ ರವರ ಕಛೇರಿಯಲ್ಲಿ ಭೂಮಿಗಳ ಸ್ಥೂಲ ನಕಾಶೆಯನ್ನು ಪರಿಶೀಲನೆಗೆ ಇಡಲಾಗಿದೆ.

**ಅನುಸೂಚಿ**

ಜಿಲ್ಲೆ: ಕೋಲಾರ ತಾಲ್ಲೂಕು: ಕೋಲಾರ ಹೋಬಳಿ: ಹೋಳೂರು ಗ್ರಾಮಗಳು: ಅಣ್ಣಿಹಳ್ಳಿ

| ಕ್ರ. ಸಂ. | ಖಾತೆದಾರರ/ ಅನುಭವದಾರರ ಅಥವಾ ಹಿತಾಸಕ್ತಿ ಹೊಂದಿರುವ ಇತರೆ ವ್ಯಕ್ತಿಯ ಹೆಸರು | ಸ.ನಂ. | ತರಹೆ | ಚೆಕ್ಕುಬಂದಿ | | | | ಬೇಕಾಗಿರುವ ಜಮೀನಿನ | |
|---|---|---|---|---|---|---|---|---|---|
| | | | | ಪೂರ್ವಕ್ಕೆ ಸ.ನಂ. | ಪಶ್ಚಿಮಕ್ಕೆ ಸ.ನಂ. | ಉತ್ತರಕ್ಕೆ ಸ.ನಂ | ದಕ್ಷಿಣಕ್ಕೆ ಸ.ನಂ. | ವಿಸ್ತೀರ್ಣ ಎ.ಗುಂ | ಆಕಾರ ರೂ.ಪೈ |
| 1 | 2 | 3 | 4 | 5 | 6 | 7 | 8 | 9 | 10 |
| 1. | 1) ಆರ್. ನಾರಾಯಣಪ್ಪ<br>2) ಯಾಮಣ್ಣ ಅಣ್ಣಿಹಳ್ಳಿ | 21/5 | ಖುಷ್ಕಿ | 21/1 | 20 | 21/5ರ ಉಳಿಕೆ | 21/5ರ ಉಳಿಕೆ | 0-03<br>0-01 | 0-15 |
| | | | | | | | ಒಟ್ಟು | **0-04** | **0-15** |
| (ಒಟ್ಟು ವಿಸ್ತೀರ್ಣ ನಾಲ್ಕು ಗುಂಟೆ ಮಾತ್ರ) | | | | | | | | | |

ಪಿ.ಆರ್.176 ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ, ಕೋಲಾರ.

**ವಿಶೇಷ ಭೂಸ್ವಾಧೀನಾಧಿಕಾರಿಗಳ ಕಾರ್ಯಾಲಯ, ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರ, ಶಿವಮೊಗ್ಗ**

**ಭೂಸ್ವಾಧೀನ ಕಾಯಿದೆ 1894ರ ಕಲಂ 16(2)ರ ಮೇರೆಗೆ ಪ್ರಕಟಣೆ**

**ಕ್ರಮಾಂಕ:ಶಿನಪ್ರಾ:ಭೂಸ್ವಾ:ಸಿಆರ್-15/84-85 ದಿನಾಂಕ: 22ನೇ ಜನವರಿ 2005**

ಕರ್ನಾಟಕ ಸರ್ಕಾರದವರು 1963ನೇ ಸಾಲಿನ ಕರ್ನಾಟಕ ಅಧಿನಿಯಮ ಕ್ರಮ ಸಂಖ್ಯೆ 17 ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಭೂಸ್ವಾಧೀನ ಅಧಿನಿಯಮ (1894ರ ಸಾಲಿನ ಕೇಂದ್ರ ಅಧಿನಿಯಮ 1ರ) ಪ್ರಕರಣ 16(2)ರ ಮೇರೆಗೆ ಈ ಮೂಲಕ ಅನುಸೂಚಿಯಡಿ ಸೂಚಿಸಲಾದ ಜಮೀನುಗಳನ್ನು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರದಿಂದ ನಿವೇಶನ ರಚಿಸಿ ಹಂಚಿಕೆ ಮಾಡುವ ಯೋಜನೆಗಾಗಿ ಅಧಿಕೃತವಾಗಿ ಸದರಿ ಭೂಸ್ವಾಧೀನ ಅಧಿನಿಯಮದ ಪ್ರಕರಣ 16(1)ರಂತೆ ವಶಪಡಿಸಿಕೊಳ್ಳಲಾಗಿದೆ ಎಂದು ಸಾರ್ವಜನಿಕರಿಗೂ ಹಾಗೂ ಸಂಬಂಧಿಸಿದವರ ತಿಳುವಳಿಕೆಗಾಗಿ ಅಧಿಸೂಚನೆ ನೀಡುವ ಮೂಲಕ ಪ್ರಕಟಿಸಲಾಗಿದೆ.

ಜಿಲ್ಲೆ: ಶಿವಮೊಗ್ಗ ತಾಲ್ಲೂಕು: ಶಿವಮೊಗ್ಗ ಹೋಬಳಿ: ನಿಧಿಗೆ ಗ್ರಾಮ: ಊರಗಡೂರು

| ಕ್ರ. ಸಂ. | ಸ.ನಂ. | ತರಹೆ | ವಿಸ್ತೀರ್ಣ ಎ-ಗು | ಆಕಾರ | ಸ್ವಾಧೀನ ಪಡೆದ ದಿನಾಂಕ |
|---|---|---|---|---|---|
| 1 | 2 | 3 | 4 | 5 | 6 |
| 1 | 340 | ಮಳೆತರಿ<br>ಖುಷ್ಕಿ | 1-29<br>1-02 | 9-35 | 22.01.2005 |
| 2 | 341 | ಮಳೆತರಿ<br>ಖುಷ್ಕಿ | 1-05<br>0-37 | 5-60<br>0-86 | |
| 3 | 342 | ಮಳೆತರಿ<br>ಖುಷ್ಕಿ | 0-07<br>0-30 | 0-90<br>6-96 | |
| 4 | 343 | ಮಳೆತರಿ | 0-28 | 1-16 | |
| 5 | 344 | ಖುಷ್ಕಿ<br>ಪೂಖರಾಬ್ | 1-38<br>0-01 | 8-70 | |
| 6 | 346 | ತರಿ<br>ಪೂ<br>ಖರಾಬ್ | 1-31<br>0-01 | 5-57 | |
| 7 | 347 | ಮಳೆತರಿ<br>ಖರಾಬ್ | 1-20<br>0-04 | 7-46 | |

